


# ಸಪ್ತಗಿರಿ

ಜೂನ್, 1995

ಬೆಲೆ : ರೂ. 2/-

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ



ನಾರಾಯಣನೆಂಬ ನಾಮದ ಬೀಜವನು ನಾಲಿಗೆಯ
ಕೂರಿಗೆಯ ಮಾಡಿ ಬಿತ್ತಿರಯ್ಯ||

ಹೃದಯ ಹೊಲವನು ಮಾಡಿ ತನುವ ನೇಗಿಲಮಾಡಿ
ತನ್ವಿರಾ ಎಂಬ ಎರಡೆತ್ತ ಹೂಡಿ
ಜ್ಞಾನವೆಂಬೊ ಮಿಣಿಯ ಕಣ್ಣಿ ಹಗ್ಗವ ಮಾಡಿ
ಮನವೆಂಬೊ ಧಾನ್ಯವ ನೋಡಿ ಬಿತ್ತಿರಯ್ಯ

ಕಾಮಕ್ರೋಧಗಳೆಂಬ ಗಿಡವನು ತರಿಯಿರಯ್ಯ
ಮದ ಮತ್ಸರವೆಂಬ ಪೊದೆಯ ಇರಿಯಿರಯ್ಯ
ಪಂಚೇಂದ್ರಿಯಗಳೆಂಬ ಮಂಚಿಕೆಯ ಹಾಕಿರಯ್ಯ
ಚಂಚಲವೆಂಬ ಹಕ್ಕಿಯ ಓಡಿಸಿರಯ್ಯ

ಉದಯಾಸ್ತಮಾನವೆಂಬ ಎರಡು ಕೊಳಗವಮಾಡಿ
ಆಯುಷದ ರಾಸಿಯನು ಅಳೆಯಿರಯ್ಯ
ಇದು ಕಾರಣ ಕಾಗಿನೆಲೆಯಾದಿ ಕೇಶವನ
ಮುದದಿಂದ ನೆನೆನೆನೆದು ಸುಖಿಯಾಗಿರಯ್ಯ

ಶ್ರೀ ಕನಕದಾಸರು.

ಸಂದರ್ಶಿಸಿ. ಆನಂದಿಸಿ.

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ
# ತಿರುಪತಿ.



## ಜ್ಯೇಷ್ಠಾಭಿಷೇಕ ಮಹೋತ್ಸವ

8--7--95 ರಿಂದ 10--7--95 ವರೆಗೆ

| | | |
|---|---|---|
| 8--7--95 | ಶನಿವಾರ | ಜ್ಯೇಷ್ಠಾಭಿಷೇಕ ಆರಂಭ. |
| 9--7--95 | ಭಾನುವಾರ | ಕವಚ ಪ್ರತಿಷ್ಠೆ. |
| 10--7--95 | ಸೋಮವಾರ | ಕವಚ ಸಮರ್ಪಣೆ. |

ನೀವೂ ಬನ್ನಿ. ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ.




ಗೌರವ ಸಂಪಾದಕರು :

ಶ್ರೀ ಎನ್. ರಮೇಶ್‌ಕುಮಾರ್, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಎನ್.ಎಸ್. ರಾಮಮೂರ್ತಿ, ಎಂ.ಎ.

ಉಪಸಂಪಾದಕ :

ಬಿ. ಎನ್. ಶ್ರೀನಿವಾಸನ್ ಎಂ. ಎ.,

ಮುದ್ರಣ :

ಪಿ. ಮೋಹನ್ ರಾವ್

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ

ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ

ದೊರೆಯುವುವು

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**





**ಸಂಪುಟ -- 26　ಜೂನ್ 1995　ಸಂಚಿಕೆ --1**


# ವಿಷಯಸೂಚಿ



ಮುಖ ಚಿತ್ರ : ತಿರುಚಾನೂರು ಪ್ಲವೋತ್ಸವದಲ್ಲಿ ಶ್ರೀ ಪದ್ಮಾವತೀದೇವಿ.

ಹಿಂಬದಿಯಲ್ಲಿ : ಅಪ್ಪಲಾಯಗುಂಟದ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ.

ಒಳಗಡೆ : 1) ನಮ್ಮಾಳ್ವಾರ್.

2) ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವದಲ್ಲಿ ಗರುಡೋತ್ಸವ.

ಮಧ್ಯ ವಿಸ್ತೃತಿ : ಕಾಳಿಂಗಮರ್ದನ ಅಲಂಕಾರ - ಮುತ್ತಿನ ಪಲ್ಲಕ್ಕಿಯಲ್ಲಿ ಸ್ವಾಮಿ.

2) ತಿರುಮಂಜನದಲ್ಲಿ ಸ್ವಾಮಿ.




ಪರಿಸ್ಥಿತಿ ಅಷ್ಟೇನೂ ಆಶಾದಾಯಕವಾಗಿಲ್ಲ. ಎತ್ತ ನೋಡಿದರೂ ಕುತ್ತ ಕಾಣಿಸುತ್ತಿದೆ. ಇದು ಸಮಾಜದ ಪರಿಸ್ಥಿತಿ ಆಗಬಹುದು ಅಥವಾ ವ್ಯಕ್ತಿಯದಾಗಬಹುದು. ಆಗೊಂದು ಆಶಾದೀಪ - ಭಗವಂತ ಇದ್ದಾನೆ ಅವನು ಕೈಹಿಡಿದು ಕರೆದೊಯ್ಯುತ್ತಾನೆ ಎಂದೊಂದು ನಂಬಿಕೆ. ಇದು ಭಕ್ತರಲ್ಲಿ ಒಂದು ಸಮಾಧಾನ ಸ್ವಾಂತನ ನೀಡುವ ಅಂಶವಾಗುತ್ತದೆ. ಎಂತಲೇ 'ಅವನ' ಧ್ಯಾನ, ಪೂಜೆ ಅರ್ಚನೆ ಆರಾಧನೆ ಮೊದಲಾದವುಗಳಿಗೆಲ್ಲ ಅರ್ಥ ಉಂಟಾಗುತ್ತದೆ. ಈ ತೆರನಾದ ನಂಬಿಕೆ, ವಿಶ್ವಾಸಗಳಿಂದಲೇ ವ್ಯಷ್ಟಿ, ಸಮಷ್ಟಿಯ, ಜೀವನಗತಿ ಸುಧಾರಿಸಿ ಸಮಗ್ರ ಅಭಿವೃದ್ಧಿ ಸಾಧ್ಯ ಎಂದು ಹಿಂದೆ ಆಗಿಹೋದ ಹಿರಿಯರು, ಇಂದು ನಮ್ಮ ಮಧ್ಯದಲ್ಲಿರುವ ನಾವು ಹಿರಿಯರೆನ್ನುವ ಮಂದಿ ಒಪ್ಪಿನಡೆದಿರುವುದನ್ನು ಕಾಣುತ್ತಿದ್ದೇವೆ.

ಭಾವನೆಯ ಮಾತಾಯಿತು. ಅದು ಹರಡಬೇಕು, ಎಲ್ಲರಿಗೂ ತಿಳಿಯಬೇಕು, ತಿಳಿಸುವ ಮಾಧ್ಯಮ ಒಂದಿರಬೇಕು - ಎಂದಾಗ ಪತ್ರಿಕೆಯ ಪ್ರಾಮುಖ್ಯ ಗಮನಕ್ಕೆ ಬರುತ್ತದೆ. ಒಂದು ಸೂತ್ರ, ಒಂದು ಸಾಮಾಜಿಕ ವಿಕಾಸದ ಶಿಕ್ಷಣ, ಸಾರ್ವಜನಿಕ ಶಾಂತಿ ಸೌಹಾರ್ದದ ಪ್ರಸಾರದಲ್ಲಿ ಪತ್ರಿಕೆಗಳ ಪಾತ್ರ ಹಿರಿದು. ಅದರಲ್ಲೂ ಧಾರ್ಮಿಕ ಪತ್ರಿಕೆಗಳ ಮಹತ್ವ ಮತ್ತೂ ಹೆಚ್ಚು. 'ದೇವರೊಬ್ಬ - ನಾಮ ಹಲವು' ಎಂಬ ತತ್ತ್ವ, 'ಎಲ್ಲ ರಸ್ತೆಗಳೇ - ಗಮ್ಯ ಅವನೇ' ಎಂಬುದನ್ನೂ ಪರಿಣಾಮಕಾರಿಯಾಗಿ ಪ್ರತಿಬಿಂಬಿಸಬೇಕಾದ್ದು ಧಾರ್ಮಿಕ ಪತ್ರಿಕೆಗಳ ಧರ್ಮ. ಇಲ್ಲಿ ಮೇಲುಕೀಳು, ಹೆಚ್ಚು ಕಡಮೆಗಳ ಭಿನ್ನ ಭಾವಗಳಿಗೆ ತಾವಿಲ್ಲ. ಎಲ್ಲ ಒಂದೆ ಎಂಬುದೊಂದೆ ಘೋಷಣೆ. ಇದನ್ನು ಶ್ರೀ ವೆಂಕಟೇಶ್ವರ ಸ್ವಾಮಿ ಸಮರ್ಥವಾಗಿ ಬಿಂಬಿಸುವ ದೇವರು ಎಂಬುದು ರಾಷ್ಟ್ರೀಯ ಅಭಿಪ್ರಾಯ. ಇಂತಹ ಸ್ವಾಮಿಯ ಸೇವೆಯಲ್ಲಿ ಸನಾತನಧರ್ಮದ ತಿರುಳನ್ನು ತಿಂಗಳು ತಿಂಗಳೂ ಹಂಚುತ್ತ ಐದು ಭಾಷೆಗಳಲ್ಲಿ ಜನಪ್ರಿಯವಾಗಿದೆ ಸಪ್ತಗಿರಿ.

ಇದೀಗ 26 ನೇ ವರ್ಷದಲ್ಲಿ ಪ್ರವೇಶಿಸುತ್ತಿರುವ ಸಪ್ತಗಿರಿ ಇನ್ನೊಂದು ಹೊಸ ಮಜಲಿನಲ್ಲಿದೆ. ಹೊಸ ಯುಗದ ಆರಂಭದ ಈ ಹೊತ್ತಿನಲ್ಲಿ, ಸಪ್ತಗಿರಿಯಲ್ಲಿ ಅಭಿಮಾನ ಬೆಳೆಸಿಕೊಂಡಿರುವ, ಧಾರ್ಮಿಕ ಆಸಕ್ತಿ ಇರುವ ಶ್ರೀ ಎನ್. ರಮೇಶ್‌ಕುಮಾರರು ನಮ್ಮ ಗೌರವ ಸಂಪಾದಕರೂ ಆಗಿದ್ದು, ಮತ್ತೂ ಹೆಚ್ಚಿನ ಓದುಗರನ್ನು ತಲುಪುವ, ತಿರುಮಲೆಯ ಸ್ವಾಮಿಯ ಭಕ್ತಿ, ಸುದ್ದಿ, ಮತ್ತೂ ಹೆಚ್ಚು ಹರಡಬೇಕೆನ್ನುವ ಉತ್ಸಾಹಿಗಳು ಅವರು. ಹಾಗಾಗಿಯೇ ಸಪ್ತಗಿರಿಯನ್ನು ಅದರ ಒಳಹೂರಣ ಮತ್ತೂ ಆಕರ್ಷಕವಾಗುವಂತೆ ಮಾಡುವ ಸಲಹೆ ಸೂಚನೆಗಳನ್ನು ನಿರ್ದೇಶನಗಳನ್ನು ನೀಡುತ್ತ ತಿ.ತಿ.ದೇ. ಗಳ ಪ್ರಕಟನೆಗಳಲ್ಲಿ ಸಪ್ತಗಿರಿ ಪತ್ರಿಕೆ ಪ್ರಧಾನವೆಂಬ ನಿಲುವನ್ನು ಹೊಂದಿ ಮಾರ್ಗದರ್ಶನ ನೀಡುತ್ತಿರುವರು.

ಹೀಗಾಗಿ 26 ನೇ ವರ್ಷಕ್ಕೆ ಕಾಲಿಡುತ್ತಿರುವ ನಮ್ಮ ನಿಮ್ಮ ಪತ್ರಿಕೆ ಮತ್ತಷ್ಟು ಸುಂದರವಾಗಲು, ದೋಧಕವಾಗಲು ಪ್ರಯತ್ನ ನಡೆಸಲಾಗುತ್ತಿದೆ. ಈ ದಿಸೆಯಲ್ಲಿ ಲೇಖನಗಳ ಗೌರವಧನವನ್ನು ಹೆಚ್ಚಿಸುವ ಉದ್ದೇಶವೂ ಇದೆ. ಹೆಚ್ಚಿನ ಆ ಚಿತ್ರಗಳನ್ನು ಬಳಸಿ, ಹೆಚ್ಚಿನ ಕರ್ಷಕತೆಯನ್ನು ತರುವ ಪ್ರಯತ್ನ ನಡೆದಿದೆ. ಇದಕ್ಕೆ ಓದುಗರ ಲೇಖಕರ ಸಹಕಾರವಿದೆಯೆಂದು ಭಾವಿಸಲಾಗಿದೆ.

ಸರ್ವೋದ್ದೇಶಗಳನ್ನೂ ಸಾಕಾರಗೊಳಿಸುವ ಸ್ವಾಮಿ ವೆಂಕಟೇಶ್ವರನ ಆಶೀರ್ವಾದವನ್ನು ಬೇಡುತ್ತ ಹೊಸ ಮುಂಜಾವಿನೆಡೆಗೆ ನಡೆಯುವ ಉದ್ದೇಶ ಅವನ ಕೈಂಕರ್ಯಪರರಾದ ನಮ್ಮದು.

* * * * *

ಸಂಜಾತ ಭಾಷೆಗಳಲ್ಲೆಲ್ಲ ಅತ್ಯಂತ
ದ ಸಂಸ್ಕೃತ ಇಂದು ಭಾರತಕ್ಕೆ ಮಾತ್ರ
ಿಲ್ಲ -- ಎಂಬುದು ಗಮನಾರ್ಹವಾದ
ು ತನ್ನ ಸತ್ವಸಾಮರ್ಥ್ಯಗಳಿಂದ ಜಗದ
ದೆ. ತನ್ನ ತವರು ಮನೆಯಾದ ಭಾರ
ುಗಿರಿಯಲ್ಲಿದ್ದಾಗಲೂ ಸಂಸ್ಕೃತವು ಅಳ
ೇಶಗಳಾದ ಇಂಗ್ಲೆಂಡ್, ಫ್ರಾನ್ಸ್ --
ರಾಷ್ಟ್ರಗಳನ್ನೆಲ್ಲ ವ್ಯಾಪಿಸಿತು. ೧೮೮೩
ಡ್‌ನ ಅಕ್ಸ್‌ಫರ್ಡ್‌ನಲ್ಲಿ ಇಂಡಿಯನ್
ನ್ ಇನ್ ಇಂಗ್ಲೆಂಡ್ ಎಂಬ ಭಾರ
ೆ ಆರಂಭಗೊಂಡಿತು. ಅದರ ಉದ್ಘಾ
ದವರು ಇಂಗ್ಲೆಂಡಿನ ರಾಜ ಕುಮಾರ
ವೇಲ್ಸ್. ಆ ಸಂಸ್ಥೆಯ ಉದ್ಘಾಟನಾ
ಲಿ--

ಕಂಪಯಾ ನಿತ್ಯಂ
ವಿದ್ಯಾ ಮಹೀಯತಾಂ
ವರ್ತಾಂಗ್ಲಭೂಮ್ಯೋಶ್ಚ
ಮೈತ್ರೀ ವಿವರ್ಧತಾಂ

ುಗ್ರಹದಿಂದ ಎಂದೆಂದಿಗೂ ಭಾರ
ಕ್ಕೆ ಗೌರವ ಪಡೆಯಲಿ; ಭಾರತ --
ಗಳ ನಡುವಿನ ಮೈತ್ರಿ ಇನ್ನಷ್ಟು ಹೆಚ್ಚಲಿ
ಕೆತ್ತಿಸಿರುವುದನ್ನು ಕಂಡಾಗ ಅಂದಿನ
ಳರಸರು ತಮ್ಮ ಗುಲಾಮ ದೇಶದ
ದಕ್ಕೆ ಎಷ್ಟೊಂದು ಮಾನ್ಯತೆ ನೀಡಿ
ುತ್ತಿದ್ದರೆಂದು ತಿಳಿಯುತ್ತದೆ. ಇಂತಹ
ೆ ಬಹುಶಃ ಜಗತ್ತಿನ ಇತಿಹಾಸದಲ್ಲೇ

ವಕುಟುಂಬಕಂ' -- ಎಂಬ ಭಾವನೆ
ವಾದ ಅರ್ಥದಲ್ಲಿ ಬೆಳೆಸುವ ಈ
ಕುರಿತಾದ ಅಧ್ಯಯನ -- ಅಧ್ಯಾಪನ
ಧನೆಗಳು ಇಂದು ಜಗತ್ತಿನ ಹೆಚ್ಚಿನ
ಗಳಲ್ಲಿ ನಡೆಯುತ್ತಿದೆ. ಇತ್ತೀಚಿನ
ಸಂಸ್ಕೃತ ಸಮ್ಮೇಳನಗಳು ಟೊರಿನೋ
ಪ್ಯಾರಿಸ್ (೧೯೭೭), ವೈಮಾರ್;
(೧೯೭೮), ಫಿಲಿಡೆಲ್ಫಿಯಾ (೧೯೮೪),
ನೆದರಲ್ಯಾಂಡ್ಸ್ (೧೯೮೭), ವಿಯನ್ನ;
೧೯೯೦) ಗಳಲ್ಲಿ ನಡೆದಾಗ ಅಲ್ಲಿ ಭಾರ
ದ್ವಾಂಸರಿಗಿಂತ ವಿದೇಶೀ ಸಂಸ್ಕೃತ ವಿದ್ವಾಂ
ರ ಸಂಖ್ಯೆಯಲ್ಲಿ ಇದ್ದುದು ಇದಕ್ಕೆ ಒಂದು
ಮಾತ್ರ. ಆಕಾಶವಾಣಿ -- ದೂರದ
ಮೂಲಕ ಮೊದಲಿನಿಂದಲೂ ಸಂಸ್ಕೃತ
ಮತ್ತಿತರ ಕಾರ್ಯಕ್ರಮಗಳನ್ನು ಪ್ರಸಾರ
, ವಿಶ್ವವಿದ್ಯಾಲಯಗಳಲ್ಲೂ ಸಂಸ್ಕೃತಕ್ಕೆ

# ಜಗದಗಲ ಸಂಸ್ಕೃತ

---ಎಚ್. ವಿ. ನರಸಿಂಹಮೂರ್ತಿ.

**ಸಂಸ್ಕೃತ ಸಂಸ್ಕೃತಿಯ, ಇತಿಹಾಸದ, ಸಮಾಜದ, ಕನ್ನಡಿಯಂತೆ ಇಂದು ನಮ್ಮ ಮುಂದಿದೆ. ಇದರ ಅಧ್ಯಯನ ಅಧ್ಯಾಪನಗಳು ವಿಶ್ವಾದ್ಯಂತ ನಡೆದಿದ್ದು ಈಗೀಗ ಇದರ ಪ್ರಾಮುಖ್ಯದ ಬಗ್ಗೆ ಕುಳಿತು ಯೋಚಿಸುವ ಹಾಗಾಗಿದೆ. ವೈಜ್ಞಾನಿಕವಾಗಿ ಮುಂದುವರೆದಂತೆಲ್ಲ ಮನುಷ್ಯನಿಗೆ ಸಂಸ್ಕೃತದಿಂದ ಉಪಕಾರ ಹೆಚ್ಚುತ್ತ ಹೋಗುತ್ತದೆ ಎಂಬ ಅಂಶವನ್ನೂ ಗುರುತಿಸಲಾಗುತ್ತಿದೆ. ಹಾಗಾಗಿಯೇ ಸಾಮಾಜಿಕವಾಗಿಯೂ ಅದರ ಅಗತ್ಯ ಇಮ್ಮಡಿಯಾಗಿದೆ. ಸನಾತನ ಧರ್ಮದ ವಿಷಯದಲ್ಲಿಯಂತೂ ಸಂಸ್ಕೃತಾಧ್ಯಯನ ಅನಿವಾರ್ಯ. ಖ್ಯಾತ ವಿದ್ವಾಂಸ ಸಂಸ್ಕೃತ ಅಧ್ಯಾಪಕ ಶ್ರೀ ಎಚ್. ವಿ. ನರಸಿಂಹಮೂರ್ತಿ ಅವರು ವಿವರಿಸುತ್ತಾರೆ.**

ಅದ್ಯತೆ ನೀಡಿರುವ ಜರ್ಮನ್ ದೇಶ ಸಂಸ್ಕೃತದ ಎರಡನೇ ತವರುಮನೆ ಇದ್ದಂತೆ. ನಮ್ಮ ಪವಿತ್ರ ಗ್ರಂಥ ಋಗ್ವೇದವನ್ನು ಮೊತ್ತಮೊದಲಿಗೆ ಸಾಯಣ ಭಾಷ್ಯದೊಂದಿಗೆ ಸಮಗ್ರವಾಗಿ ಪ್ರಕಟಿಸಿದ ಕೀರ್ತಿ ಈ ದೇಶದ ಮ್ಯಾಕ್ಸ್‌ಮುಲ್ಲರ್ ರವರಿಗೆ ಸಲ್ಲುತ್ತದೆ. ತಮ್ಮ ಬಗೆಗೆ ಅವರು--

ಶಾರ್ಮಣ್ಯ ದೇಶ ಜಾತೇನ
ಗೋಮಾಂತಕ ನಿವಾಸಿನಾ
ಮೋಕ್ಷ ಮುಲ್ಲರ ಭಟ್ಟೇನ
ಭಾಷ್ಯಮೇತದ್ವಿಶೋಧಿತಮ್

--ಎಂದು ಅಭಿಮಾನದಿಂದ ಹೇಳಿಕೊಳ್ಳುತ್ತಾರೆ. ಪ್ರಪ್ರಥಮವಾಗಿ ಅಣುಸ್ಫೋಟ ಮಾಡಿದ ಜರ್ಮನ್ ವಿಜ್ಞಾನಿ ಡಾ|| ಓಪನ್ ಹೇಮರ್ ಸಂಸ್ಕೃತವನ್ನು ಚೆನ್ನಾಗಿ ಬಲ್ಲವರು. ಮೊದಲ ಬಾರಿಗೆ ಅಣು ಬಾಂಬನ್ನು ಸ್ಫೋಟಗೊಳಿಸುವಾಗ ಭಗವದ್ಗೀತೆಯ ಅರ್ಜುನನಂತೆ ವಿಷಾದಗೊಂಡು, ಕೊನೆಗೆ 'ಮಯ್ಯೈ ವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿನ್' -- ಎಂಬ ಗೀತೋಕ್ತಿಯನ್ನು ಸ್ಮರಿಸಿ ಸ್ಫೋಟಗೊಳಿಸಿದರಂತೆ. ಆಂಗ್ಲ ಮಹಾ ಕವಿ ಟಿ. ಎಸ್. ಎಲಿಯಟ್ ತನ್ನ ನಲವತ್ತನೇ ವಯಸ್ಸಿನ ನಂತರ ಸಂಸ್ಕೃತ ಕಲಿತು, ಅದರ ಸಂದೇಶವನ್ನು 'The Waste Land' ಮೊದಲಾದ ತನ್ನ ಕಾವ್ಯಗಳಲ್ಲಿ ಸಾರಿದ್ದಾನೆ. 'ಒಬ್ಬ ವ್ಯಕ್ತಿ ತನ್ನ ಭಾವನೆಗಳ ಅಭಿವ್ಯಕ್ತಿಯನ್ನು ಅತ್ಯುತ್ತಮವಾಗಿ ಮಾಡ ಬಲ್ಲ ಏಕೈಕ ಭಾಷೆ ಸಂಸ್ಕೃತ' ಎಂಬುದು ಅವನ ಖಚಿತ ಅಭಿಪ್ರಾಯ. ಇತ್ತೀಚಿನ ಒಂದು ವರದಿಯಂತೆ ಇಂದು ಜಗತ್ತಿನ ಪ್ರಮುಖ ದೇಶಗಳಾದ ಅಮೆರಿಕಾ, ರಷ್ಯ ಇಂಗ್ಲೆಂಡ್, ಆಸ್ಟ್ರೇಲಿಯಾ, ಆಸ್ಟ್ರಿಯಾ, ಬೆಲ್ಜಿಯಂ, ಕೆನಡಾ, ಚೀನ, ಡೆನ್ಮಾರ್ಕ್, ಜರ್ಮನಿ, ಫಿನ್‌ಲ್ಯಾಂಡ್, ಫ್ರಾನ್ಸ್, ಹಂಗೇರಿ, ಇಟಲಿ, ಜಪಾನ್, ಕೊರಿಯಾ, ನೇಪಾಳ, ನೆದರ್‌ಲ್ಯಾಂಡ್ಸ್, ಪೋಲೆಂಡ್, ರುಮಾನಿಯಾ, ಸ್ಪೇನ್, ಶ್ರೀಲಂಕಾ, ಸ್ವೀಡನ್, ಯುಗೋಸ್ಲಾವಿಯಾ -- ಮುಂತಾದ ಕಡೆ ಸಂಸ್ಕೃತ ಕಲಿಸುವ ವ್ಯವಸ್ಥೆ ಇದೆ. ಫಿಲಿಡೆಲ್ಫಿಯಾದ ವಿಶ್ವ ಸಂಸ್ಕೃತ ಸಮ್ಮೇಳನದಲ್ಲಿ ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯದ ದಕ್ಷಿಣ ಏಷ್ಯಾ ಅಧ್ಯಯನ ವಿಭಾಗದ ಮುಖ್ಯಸ್ಥ ಪ್ರೊ|| ಲ್ಯೂಡೋಲಾಚರ್ ಹೇಳಿದಂತೆ 'ಅಮೇರಿಕನ್ ಓರಿಯಂಟಲ್ ಸೊಸೈಟಿ'ಯ ಸಾವಿರಕ್ಕೂ ಮಿಕ್ಕಿದ ಸದಸ್ಯರಲ್ಲಿ ನೂರಾರು ಮಂದಿ ಸಂಸ್ಕೃತ ವಿದ್ವಾಂಸರಿದ್ದಾರೆ. ಇವರೆಲ್ಲ ಸಂಸ್ಕೃತ ಮತ್ತು ಪ್ರಾಚೀನ ಭಾರತೀಯ ಸಂಸ್ಕೃತಿಯ ಬಗ್ಗೆ ಆಗಾಗ ಸಭೆ ಸೇರಿ ಚರ್ಚಿಸುತ್ತಾರೆ. ಓರಿಯಂಟಲ್ ಸೊಸೈಟಿಯು ಪ್ರಕಟಿಸುವ ನಿಯತಕಾಲಿಕೆಯಲ್ಲಿ ಬಹಳಷ್ಟು ಪುಟಗಳು ಸಂಸ್ಕೃತಕ್ಕೆ ಮುಡಿಪಾಗಿರುತ್ತವೆ. ಜಗತ್ತಿನ ಯಾವುದೋ ಮೂಲೆಯಲ್ಲಿರುವ ಉಡುಪಿಯಂತಹ ಊರಿಗೆ ಪ್ರಗಲ್ಭ ಸಂಸ್ಕೃತ ವಿದ್ವಾಂಸರಾದ ಶ್ರೀ ಬನ್ನಂಜೆ ಗೋವಿಂದಾಚಾರ್ಯ ರಂಥವರನ್ನು ಹುಡುಕಿಕೊಂಡು ಬರುತ್ತಿರುವ ರಾಬರ್ಟ್ ಫಿಲಿಪ್ ಗೋಲ್ಡ್‌ಮ್ಯಾನ್, ಎಡ್ವಿನ್ ಟೋರೋ, ಶ್ರೀಮತಿ ಸ್ಯಾಲಿ ಜೆ. ಎಂ. ಸದರ್‌ಲ್ಯಾಂಡ್ -- ಮುಂತಾದ ವಿದೇಶೀ ಸಂಸ್ಕೃತ ವಿದ್ವಾಂಸರ ಸಂಸ್ಕೃತಾಸಕ್ತಿ ಅಸಾಧಾರಣವಾದುದು. ಕೆಲವು ವರ್ಷಗಳ ಹಿಂದೆ ಅಂತಾರಾಷ್ಟ್ರೀಯ ರೋಟರಿ ಸಂಸ್ಥೆಯ ಯುವ ವಿನಿಮಯ ಕಾರ್ಯಕ್ರಮವೊಂದರ ಅನ್ವಯ ಅಮೇರಿಕೆಯಲ್ಲಿ ಸಂಚಾರ ಮಾಡುತ್ತಿದ್ದಾಗ ಅಲ್ಲಿನ ಸುಮಾರು ೨೯ ವಿಶ್ವವಿದ್ಯಾನಿಲಯಗಳನ್ನು ಸಂದರ್ಶಿಸುವ ಅವಕಾಶ

## ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ.ಓ. ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ. ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ.ತಿ.ದೇ. ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಡಿ.ಡಿ. ಯನ್ನು ಕಳುಹಿಸಬೇಕು. ಡಿ.ಡಿ. ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ, ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು.

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್,**
(ರಿಸೆಪ್ಷನ್) ತಿ.ತಿ.ದೇ. ತಿರುಪತಿ.

## ಕಾಟೇಜುಗಳ ಸೇವಾ ಶುಲ್ಕದಲ್ಲಿ ಹೆಚ್ಚಳ

1-5-95 ರಿಂದ ತಿರುಮಲೆಯಲ್ಲಿ ವಿವಿಧ ಪ್ರಾಂತ್ಯಗಳ ಕಾಟೇಜುಗಳ ವಸತಿಯ ದಿನವಹಿ ಸೇವಾಶುಲ್ಕ ತುಸು ಹೆಚ್ಚಾಗಿದೆ. ಭಕ್ತರು ಈ ಪರಿವರ್ತನೆಯನ್ನು ಗಮನಿಸಬೇಕೆಂದು ಕೋರಲಾಗಿದೆ.

| ಕ್ರಮ ಸಂಖ್ಯೆ | ಕಾಟೇಜು ಸ್ಥಳ ಹಾಗೂ ಕ್ರಮಾಂಕ | ಹಳೆಯ ಶುಲ್ಕ ರೂಗಳಲ್ಲಿ | ಹೊಸ ಶುಲ್ಕ ರೂಗಳಲ್ಲಿ |
|---|---|---|---|
| 1. | ಎನ್.ಜಿ.ಸಿ. (ವಿಶೇಷಮಾದರಿ) | | |
| | ನಂ-2,3,4,6,7,8,9,10, | | |
| | 11,14,15,16,17,18, | 350/- | 400/- |
| | ನಂ-5,12,13. | | (ಒಂದೊಂದು ಕಾಟೇಜಿಗೆ) |
| 2. | ಎಂ.ಬಿ.ಸಿ. | | |
| | 19,20,21,22,23,24, ಎ ಹಾಗೂ ಬಿ ಭಾಗಗಳು | | |
| | 28,29,30,32,33,34,35,36,37, ಎ.ಬಿ.ಸಿ.ಡಿ. ಭಾಗಗಳು | 50/- | 75/- |
| | 38,39,40,41, ಎ.ಬಿ.ಸಿ.ಡಿ. ಭಾಗಗಳು | | (ಅರ್ಧ ಕಾಟೇಜಿಗೆ) |
| | 42, ಎ. ಬಿ. ಭಾಗಗಳು | | |
| 3. | ಟಿ.ಬಿ.ಸಿ (ಒಳಗಡೆ) | | |
| | 51 ಎ, ಬಿ, ಯಿಂದ 69 ಎ, ಬಿ, ವರೆಗೆ | 75/- | 100/- |
| | ಟಿ.ಬಿ.ಸಿ (ಹೊರಗೆ) | | (ಒಂದೊಂದು ಭಾಗ) |
| | 70 ಎ, ಬಿ, ಯಿಂದ 76 ಎ, ಬಿ, | 50/- | |
| | 70 ಸಿ, ಡಿ, ಯಿಂದ 76 ಸಿ, ಡಿ, | 60/- | 75/- |
| | 129 ಎ, ಬಿ, ಯಿಂದ 151 ಎ, ಬಿ, | 50/- | (ಒಂದೊಂದು ಭಾಗ) |
| | 129 ಸಿ, ಡಿ, ಯಿಂದ 151 ಸಿ, ಡಿ, | 60/- | |
| 4. | ಎ.ಟಿ.ಸಿ. | | |
| | 77 ರಿಂದ 128 ವರೆಗೆ (ಒಂದೊಂದು ಭಾಗ) | 30/- | 50/- |
| | ಸೂಟ್ 94 ರಿಂದ 98 ವರೆಗೆ (ಒಂದೊಂದು ಸೂಟ್) | 15/- | 30/- |
| 5. | ಎಚ್.ವಿ.ಡಿ.ಸಿ. (ಒಂದೊಂದು ಸೂಟ್) | 50/- | 100/- |

ಮಿಕ್ಕಂತೆ ಬದಲಾವಣೆಯಿರುವುದಿಲ್ಲ.

ಕಾರ್ಯನಿರ್ವಹಣಾಧಿಕಾರಿ

ನಿಟ್ಟಿನಲ್ಲಿ ಭಾರತೀಯ ಭಾಷೆ ಮತ್ತು ಸಾಹಿತ್ಯಗಳ ವಿದ್ಯಾರ್ಥಿಗಳಿಗೆಲ್ಲ ಸಂಸ್ಕೃತ ಶಿಕ್ಷಣ ಅನಿವಾರ್ಯ.

### ಭಾಷೆಯಿಂದ ಭಾವೈಕ್ಯ

ಸಂಸ್ಕೃತ ರಾಷ್ಟ್ರೀಯ ಭಾವೈಕ್ಯವನ್ನು ಪೋಷಿಸುವ ಭಾಷೆ. ತಾವು ಕಲಿಯುವ ಮತ್ತು ಮಾತನಾಡುವ ಎಲ್ಲ ಪ್ರಾಂತೀಯ ಭಾಷೆಗಳಿಗೂ ಸಂಸ್ಕೃತವೇ ತಾಯಿ ಅಥವಾ ಸಾಕುತಾಯಿ ಎಂಬ ಭಾವನೆ ಮೂಡಿ ಬಂದರೆ ಇಂದು ಕಾಣುವ ಭಾಷಾ ಕಲಹಕ್ಕೆ ಎಡೆ ಇರುವುದಿಲ್ಲ. ರಾಷ್ಟ್ರೀಯ ಭಾವೈಕ್ಯ ತಾನಾಗಿಯೇ ನೆಲೆಗೊಳ್ಳುತ್ತದೆ. ಖ್ಯಾತ ಸಾಹಿತಿ ಶ್ರೀ ಸಿದ್ದಯ್ಯ ಪುರಾಣಿಕರಂದಂತೆ 'ಸಂಸ್ಕೃತವು ಭಾರತವನ್ನೇ ಒಂದಾಗಿ ಬೆಸೆಯುವ ಭಾಷೆ'. ಸಂಸ್ಕೃತವು ಯಾವುದೇ ಒಂದು ನಿರ್ದಿಷ್ಟ ಪ್ರಾಂತ್ಯ ರಾಜ್ಯ ಅಥವಾ ಧರ್ಮದ ಭಾಷೆಯಲ್ಲ; ಅದು ಇಡೀ ರಾಷ್ಟ್ರದ ಭಾಷೆ. ಈ ಭಾಷೆ ನಮ್ಮ ದೇಶದ ಸಂಸ್ಕೃತಿ ಮತ್ತು ರಾಷ್ಟ್ರೀಯ ಏಕತೆಯ ಪ್ರತೀಕ. ಇಂತಹ ಭಾಷೆಯನ್ನು ಕಳೆದುಕೊಂಡರೆ ಭಾರತ 'ಭಾರತವಾಗಿ' ಉಳಿಯಲಾರದು. ಅದಕ್ಕೆ ಬೇರೆ ಏನಾದರೂ ಹೆಸರನ್ನು ಹುಡುಕಬೇಕಾದೀತು.





### ಶ್ರೀ ಬಾಲಾಜೀ ವಿಕಲಾಂಗ ಆಸ್ಪತ್ರೆ
### ತಿ. ತಿ. ದೇ. ತಿರುಪತಿ.

ತಿರುಮಲೆ ತಿರುಪತಿ ದೇವಸ್ಥಾನಗಳ ಶ್ರೀ ಬಾಲಾಜೀ ವಿಕಲಾಂಗರ ಆಸ್ಪತ್ರೆಯಲ್ಲಿ ಕೃತಕ ಅವಯವಗಳನ್ನು ವಿಕಲಾಂಗರಿಗೆ ಉಚಿತವಾಗಿ ನೀಡುವ ಯೋಜನೆಯಿದ್ದು, ಸದರಿ ಮಾನವೋಪಯೋಗಿ ಯೋಜನೆಗೆ ದಾನಿಗಳು ಉದಾರವಾಗಿ ವಂತಿಗೆಯನ್ನು ನೀಡಲು ಅವಕಾಶವಿದೆ.

ದಾನಿಗಳು ಈ ಅವಕಾಶವನ್ನು ಬಳಸಿಕೊಂಡು ಈ ಘನೋದ್ದೇಶದ ಯೋಜನೆಯ ಸಾಫಲ್ಯಕ್ಕೆ ನೆರವಾಗಬೇಕೆಂದು ಬೇಡಲಾಗಿದೆ.

**ತಿ. ತಿ. ದೇ.**



# ನರಶ್ರೇಷ್ಠ ನರಸಿಂಹ

---ಶ್ರೀಮತಿ ಸುಮಿತ್ರಾ ಶಾನಭಾಗ.

**ನರಸಿಂಹ ದಶಾವತಾರಗಳಲ್ಲಿ ಪ್ರಸಿದ್ಧ. ಈ ದೇವರ ಅರ್ಚಾಮೂರ್ತಿಗಳು ಕರ್ನಾಟಕದಲ್ಲಿ ನೂರಾರುಕಡೆ ಇವೆ. ಆಂಧ್ರಪ್ರದೇಶ, ತಮಿಳುನಾಡುಗಳಲ್ಲೂ ಉಂಟಾದರೂ ಸಂಖ್ಯಾಬಾಹುಳ್ಯ ಕರ್ನಾಟಕದ್ದೇ. ವಿವಿಧ ರೂಪಗಳಲ್ಲಿ ಅರ್ಚಿಸಲ್ಪಡುವ ನರಸಿಂಹ ಮೂರ್ತಿಯ ಹಲವಾರು ಪ್ರಸಿದ್ಧ ಸ್ಥಳಗಳ ಪರಿಚಯ ಈ ಕಿರುಲೇಖನ.**



ಕೇವಲ ಒಂದು ಶಿಶುವಿಗಾಗಿ ವಿಷ್ಣುವು ವಿಭವರೂಪದಲ್ಲಿ ಸಂಭವಿಸಿ ನಿಮಿಷಾರ್ಧದಲ್ಲಿ ತನ್ನ ಕಾರ್ಯ ಪೂರೈಸಿದ ಅವತಾರವಿದು. ಕೋರೆ ದಾಡೆ, ಕೆಂಡ ಕಾರುವ ಕಣ್ಣುಗಳು ಕರಾಳ ಸಿಂಹ ಮುಖ ಉಳಿದಂತೆಲ್ಲ ಮಾನವ ರೂಪಿ. ಈ ಅವತಾರವೇ ನರಸಿಂಹ ಅವತಾರ. ಅವತರಿಸಿದಾಗ ಇದ್ದ ಭೀಕರ ರೂಪ ಉದ್ದೇಶ ಈಡೇರಿದ ನಂತರ ಪ್ರಸನ್ನವಾಯಿತು. ಹೀಗಾಗಿಯೇ ನರಸಿಂಹನಿಗೆ ವೈವಿಧ್ಯಮಯ ರೂಪ, ಆಕಾರ.

ಮುಖದಲ್ಲಿ ಶಾಂತಕಳೆಯಿದ್ದು ಪಕ್ಕದಲ್ಲಿ ಲಕ್ಷ್ಮೀಯನ್ನು ಕೂರಿಸಿಕೊಂಡು ಪ್ರಸನ್ನ ಚಿತ್ತನಾಗಿದ್ದ ರೂಪ ಲಕ್ಷ್ಮೀ ನರಸಿಂಹ. ಇನ್ನೂ ಅನೇಕ ರೂಪಗಳಿದ್ದು ಅವುಗಳಿಗೆ ಜ್ವಾಲಾ ನರಸಿಂಹ, ಚಿಂತಾಮಣಿ ನರಸಿಂಹ, ಝುರಣಿ ನರಸಿಂಹ, ವ್ಯಾಪ್ತಿ ನರಸಿಂಹ, ಸಾಲಿಗ್ರಾಮ ರೂಪೀ ನರಸಿಂಹ, ನೀರು ನರಸಿಂಹ - ಹೀಗೆ ಅನೇಕ ಹೆಸರುಗಳಿವೆ. ವರದ, ಯೋಗ, ಭೋಗ ಎಂಬ ಹೆಸರುಗಳೂ ನರಸಿಂಹನಿಗೆ ಸಲ್ಲುವವು. ಶ್ರೀದೇವಿ -- ಭೂದೇವಿಯರನ್ನು ಕುಳ್ಳಿರಿಸಿಕೊಂಡು ತ್ರಿಪ್ರತಿಮಾಂಗ ಮೂರ್ತಿಗಳೂ ಇವೆ. ಕೆಲವು ವಿಗ್ರಹಗಳಿಗೆ ತ್ರಿಭಂಗೀ ಶರೀರವಿದ್ದು ಹನ್ನೆರಡು ಅಥವಾ ಹದಿವಾರು ಕೈಗಳಿರುತ್ತವೆ. ನರಸಿಂಹನನ್ನು 'ನರಶ್ರೇಷ್ಠ'ನೆಂದೇ ಭಕ್ತರು ಆರಾಧಿಸುತ್ತಾರೆ.

ಅಪೂರ್ವ ದೇವಾಲಯಗಳು, ವೈವಿಧ್ಯಮಯ ಶಿಲ್ಪ -- ಶೈಲಿಗಳಲ್ಲಿ ನರಸಿಂಹನು ವಿರಾಜಮಾನನಾಗಿರುವನಾದರೂ ಹೆಚ್ಚಿನ ಕಡೆಗಳಲ್ಲಿ ನರಸಿಂಹ ವಿಗ್ರಹಗಳು ಆಶ್ರಯ ಕಂಡಿರುವುದು ಗುಹೆ ಕಂದಕಗಳಲ್ಲಿ ಅಥವಾ ಅಶ್ವತ್ಥ ವೃಕ್ಷದ ಆಶ್ರಯದಲ್ಲಿ. ನರಸಿಂಹ ಕ್ಷೇತ್ರಗಳು ಆರ್ಭಟ, ಸಡಗರ, ಸಂಭ್ರಮಗಳಿಂದ ದೂರವಾಗಿ ನಿರ್ಜನ ವಾತಾವರಣದಲ್ಲಿವೆ.

ಅವತಾರದ ಹಿನ್ನೆಲೆ -- ಪೂರ್ವಕಾಲದಲ್ಲಿ ಹಿರಣ್ಯ ಕಶಿಪು, ಹಿರಣ್ಯಾಕ್ಷರೆಂಬ ಇಬ್ಬರು ಸಹೋದರರು ತಮ್ಮ ಕ್ರೂರ ಕೃತ್ಯಗಳಿಂದ ಎಲ್ಲೆಡೆಯಲ್ಲಿ ದುಃಖವನ್ನುಂಟು ಮಾಡುತ್ತ ಹಾಹಾಕಾರವನ್ನೆಬ್ಬಿಸಿದ್ದರು. ಶ್ರೀ ವಿಷ್ಣುವು ವರಾಹ ಅವತಾರದಿಂದ ಹಿರಣ್ಯಾಕ್ಷನನ್ನು ಕೊಂದಿದ್ದರಿಂದ ಹಿರಣ್ಯಕಶಿಪುವು ವಿಷ್ಣುವಿನ ಮೇಲೆ ಸೇಡು ತೀರಿಸಿಕೊಳ್ಳಲು ಆತುರವುಳ್ಳವನಾದನು. ಈ ಕಾರ್ಯವು ಕೈಗೂಡಬೇಕಾದರೆ ಮೊದಲು ತಾನು ಬ್ರಹ್ಮದೇವನಿಂದ ವರವನ್ನು ಪಡೆದು ಅಮರನಾಗಬೇಕೆಂದು ನಿರ್ಧರಿಸಿ, ತಪಸ್ಸನ್ನಾಚರಿಸುತ್ತಿದ್ದನು. ತನ್ನ ತಪಃಪ್ರಭಾವದಿಂದ ಬ್ರಹ್ಮನನ್ನು ತೃಪ್ತಿಪಡಿಸಿ ಬ್ರಹ್ಮ ಸೃಷ್ಟಿಯ ಯಾವುದರಿಂದಲೂ, ಹಗಲು -- ರಾತ್ರಿಗಳಲ್ಲೂ, ಮನೆಯ ಒಳಗೂ ಹೊರಗೂ, ಆಯುಧಗಳಿಂದಲೂ ಮರಣವನ್ನಪ್ಪದ ವರವನ್ನು ಪಡೆದನು.

ತಾಯಿಯ ಬಸುರಲ್ಲಿದ್ದಾಗಲೇ ನಾರದರಿಂದ ಭಗವಂತನ ಚರಿತ್ರೆ ಕೇಳಿ ಸಮಸ್ತ ಜ್ಞಾನವನ್ನು ಸಂಪಾದಿಸಿಕೊಂಡ ಮಗ ಪ್ರಹ್ಲಾದ ವಿಷ್ಣು ಭಕ್ತ. ಸದಾ ನಾಲಿಗೆಯ ಮೇಲೆ ಭಗವಂತನ ನಾಮಸ್ಮರಣೆ. ದೇವ, ಗಂಧರ್ವ, ಭೂಲೋಕ, ಪಾತಾಳಲೋಕಗಳನ್ನೆಲ್ಲ ಗಡಗಡ ನಡುಗಿಸಿದ ಹಿರಣ್ಯಕಶಿಪುವಿಗೆ ಮಗನನ್ನು ಬಗ್ಗಿಸಲಾಗಲಿಲ್ಲ. ತರ-ತರದ ಶಿಕ್ಷೆಗಳನ್ನು ಕೊಟ್ಟರೂ ಅದಾವುದೂ ಪ್ರಹ್ಲಾದನ ಮೇಲೆ ಪರಿಣಾಮ ಬೀರಲಿಲ್ಲ. ಕೊನೆಗೆ ಅತಿ ಸಂತಾಪದಿಂದ ಖಡ್ಗಧಾರಿಯಾಗಿ ಸೇಡು ತೀರಿಸಿಕೊಳ್ಳುವೆನೆಂದು ಗರ್ಜಿಸುತ್ತ ಪ್ರಹ್ಲಾದನನ್ನು ಒಂದು ಕಂಬಕ್ಕೆ ಕಟ್ಟಿ "ಪ್ರಹ್ಲಾದಾ ಕುಲಾಧಮಾ ನನ್ನನ್ನು ಗೆಲ್ಲುವವರೂ ಕೊಲ್ಲುವವರೂ ಲೋಕದಲ್ಲಿ ಯಾರೂ ಇಲ್ಲ ಬಲ್ಲೆಯಾ. ನಿನ್ನನ್ನೂ ನಿನ್ನ ಭಗವಂತನನ್ನೂ ಈಗಲೇ ಯಮಪುರಿಗಟ್ಟುವೆ. ತೋರಿಸು ಎಲ್ಲಿದ್ದಾನೆ ಆ ನಿನ್ನ ವಿಷ್ಣು" ಎಂದೊಡನೆ ಪ್ರಹ್ಲಾದನು ತಂದೆಯ ಆರ್ಭಟಕ್ಕೆ ದೆದರಲಿಲ್ಲ. 'ಸರ್ವತ್ರ ಇದ್ದಾನೆ. ನಿನ್ನಲ್ಲಿ, ನನ್ನಲ್ಲಿ ಎಲ್ಲೆಡೆಯಲ್ಲಿ ಶ್ರೀಹರಿಯ ವ್ಯಾಪ್ತನಾಗಿದ್ದಾನೆ' ಎಂದನು. ಅತಿ ಸಂತಾಪಯುಕ್ತನಾದ ಹಿರಣ್ಯಕಶ್ಯಪನು ಈ "ಕಂಭದಲ್ಲಿದ್ದಾನೊ" ಎಂದು ಕೇಳಲು "ಇದ್ದಾನೆ" ಎಂದು ಉತ್ತರ ಬಂದೊಡನೆ ಹಿರಣ್ಯಕಶ್ಯಪನು ಖಡ್ಗವನ್ನು ಮೇಲಕ್ಕೆತ್ತಿ ಸಿಟ್ಟಿನಿಂದ ಕಂಬಕ್ಕೆ ಹೊಡೆದೊಡನೆ ಶ್ರೀ ವಿಷ್ಣುವು ನರಸಿಂಹಾವತಾರವನ್ನು ತಾಳಿ ಸಿಂಹ ಗರ್ಜನೆಯೊಂದಿಗೆ ಕಂಬದಿಂದ ಹೊರ ಹೊರಟು, ವೈಶಾಖ ಶುದ್ಧ ತ್ರಯೋದಶಿಯ ಸಂಧಿಕಾಲದಲ್ಲಿ ಹೊಸ್ತಿಲ ಮೇಲೆ ಹಿರಣ್ಯ ಕಶ್ಯಪನ ಹೊಟ್ಟೆಯನ್ನು ಉಗುರುಗಳಿಂದ ಹರಿದು ಅವನನ್ನು ಕೊಂದು ಲೋಕಕ್ಕೆ ಶಾಂತಿಯನ್ನು ಉಂಟುಮಾಡಿದನು. ಪ್ರಹ್ಲಾದನನ್ನು ಅನುಗ್ರಹಿಸಿ ಪ್ರಸನ್ನನಾಗಿ ಅಂತರ್ಧಾನನಾದನು.



ಕೊರವೆ ನರಸಿಂಹ

ನರಸಿಂಹ ಕ್ಷೇತ್ರಗಳು :-- ನರಸಿಂಹ ಕ್ಷೇತ್ರಗಳು ಭಯ ಭಕ್ತಿಗಳ ಸಂಕೇತವಾಗಿವೆ. ಪೀಡೆ ಪಿಶಾಚಿ ಹಿಡಿದಿರುವವರಿಗೆ ಹಾಗೂ ವಾಮಾಚಾರ ತಡೆಗ



ಸಿಂಹಾಚಲದ ವರಾಹನರಸಿಂಹ



ಮುಳಬಾಗಿಲಿನ ಯೋಗಾನರಸಿಂಹ



ಮಂಗಳಗಿರಿಯ ಆಲಯ ಮಹಾದ್ವಾರ

ಟ್ಟಲು ನರಸಿಂಹ ಕ್ಷೇತ್ರಗಳು ಪ್ರಮುಖ ಪಾತ್ರ ವಹಿಸಿವೆ. ನರಸಿಂಹ ಕ್ಷೇತ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ದಕ್ಷಿಣ ಭಾರತದಲ್ಲಿವೆ. ಹೆಚ್ಚಿನವು ಕರ್ನಾಟಕ, ಆಂಧ್ರ ಹಾಗೂ ತಮಿಳುನಾಡಿನಲ್ಲಿವೆ. ಕೇರಳದಲ್ಲಿ ಗೋದಪುರಂ ಬಿಟ್ಟರೆ ಇತರ ಪ್ರಮುಖ ನರಸಿಂಹ ಕ್ಷೇತ್ರಗಳಿಲ್ಲ. ಇಡೀ ಭಾರತದ ನರಸಿಂಹ ಕ್ಷೇತ್ರಗಳಲ್ಲಿ ಆಂಧ್ರದ ಅಹೋಬಿಲವು ತುಂಬಾ ಪ್ರಸಿದ್ಧವಾಗಿದೆ. ಉತ್ತರ ಭಾರತದಲ್ಲಿ ಜೋಷಿಮಠ ಮುಖ್ಯವಾದುದು. ಬೊಂಬಾಯಿ, ನೈಮಿಷಾರಣ್ಯಗಳಲ್ಲಿ ಅಹೋಬಿಲ ಮಠದ ಶಾಖೆಗಳಿವೆ. ಅಹೋಬಿಲ ಕ್ಷೇತ್ರದ ಜೊತೆಗೆ ಆಂಧ್ರದಲ್ಲಿ ಸಿಂಹಾಚಲ, ಮಂಗಳಗಿರಿ, ಕದಿರಿ, ಅಕಿರಿಪಲ್ಲಿ ಮುಂತಾದ ಒಂಭತ್ತು ಕ್ಷೇತ್ರಗಳಿವೆ. ತಿರುಪತಿ, ಕಂಚಿ, ಮೇಲುಕೋಟೆಗಳಲ್ಲಿಯೂ ನರಸಿಂಹನ ಸನ್ನಿಧಿ ಇದೆ.

ಭಾರತದಲ್ಲಿಯಷ್ಟೇ ಅಲ್ಲದೆ ಅಮೇರಿಕಾ, ಅಫಘಾನಿಸ್ಥಾನ, ನೇಪಾಳ, ಪಾಕಿಸ್ತಾನ, ಮಲೇಷಿಯಾಗಳಲ್ಲಿ ಕೂಡ ನರಸಿಂಹನು ಪ್ರತಿಷ್ಠಾಪಿತಗೊಂಡಿದ್ದಾನೆ.

ಕಲಾದೃಷ್ಟಿಯಲ್ಲಿ ನರಸಿಂಹ ಕ್ಷೇತ್ರಗಳು -- ಕಲಾದೃಷ್ಟಿಯಿಂದ ಕರ್ನಾಟಕದ ನುಗ್ಗೇಹಳ್ಳಿಯಲ್ಲಿರುವ ನರಸಿಂಹ ದೇವಾಲಯ ಶ್ರೇಷ್ಠವಾಗಿದೆ. ಇದು ಹೊಯ್ಸಳ ಶೈಲಿಯಲ್ಲಿದೆ. ಶೀಬೀಕ್ಷೇತ್ರದಲ್ಲಿ ರಾಮಾಯಣ, ಮಹಾಭಾರತ, ಭಾಗವತ, ನರಸಿಂಹಲೀಲೆ, ಶಿವಲೀಲೆಗಳನ್ನು ಪ್ರತಿಬಿಂಬಿಸುವ ಸೊಗಸಾದ ತೈಲ ಚಿತ್ರಗಳಿವೆ. ವಿಜಯನಗರದಲ್ಲಿ ಕಂಡು ಬರುವ ನರಸಿಂಹ ವಿಗ್ರಹ ತನ್ನ ಭವ್ಯತೆ ಹಾಗೂ ಆಕಾರಗಳಿಂದಾಗಿ ಸುಪ್ರಸಿದ್ಧವಾಗಿವೆ. ಕೃಷ್ಣದೇವರಾಯನ ಆಳ್ವಿಕೆಯಲ್ಲಿ ನಿರ್ಮಿತವಾದ ಈ ಭವ್ಯ ಮೂರ್ತಿ ಏಳು ಮೀಟರ ಎತ್ತರವಿದೆ. ವಿಜಾಪುರದಿಂದ ಹತ್ತಿರವಿರುವ ತೊರವಿಯ ಗುಹಾ ನರಸಿಂಹ ಇತಿಹಾಸ ಕಾಲದಿಂದಲೂ ಪ್ರಸಿದ್ಧ. ಇಲ್ಲಿಯ ಲಕ್ಷ್ಮೀ ನರಸಿಂಹ ವಿಗ್ರಹ ಸಾಲಿಗ್ರಾಮ ಶಿಲೆಯಿಂದ ನಿರ್ಮಿತವಾಗಿದೆ. ಸೊಂಟದುದ್ದ ಝರಿ ಹರಿಯುವುದೇ ಬೀದರಿನ ಗುಹಾ ನರಸಿಂಹನ ಆಕರ್ಷಣೆ. ಇದು ಝರಣೆ ನರಸಿಂಹ ಎಂದು ಪ್ರಸಿದ್ಧವಾಗಿದೆ. ದ.ಕ. ಜಿಲ್ಲೆಯ ಸಾಲಿಗ್ರಾಮದಲ್ಲಿ ಅನಾದಿಕಾಲದಿಂದಲೂ ದೇವರನ್ನು ಗುರುವಾಗಿ ಪೂಜಿಸುತ್ತಿದ್ದರಿಂದ ಆ ದೇವರಿಗೆ ಗುರುನರಸಿಂಹನೆಂದು ಹೆಸರು. ಹಾಲಾಡಿಯಲ್ಲಿ ಇಪ್ಪತ್ತೇಳು ಹೆಡೆಗಳ ಆದಿಶೇಷನ ಮೇಲೆ ಲಕ್ಷ್ಮೀಸಹಿತ ವಿರಾಜಮಾನನಾದ ನರಸಿಂಹ ವಿಗ್ರಹವಿದೆ. ರಾಯಚೂರ ಜಿಲ್ಲೆಯ ಕೊಪ್ಪರ ಎಂಬಲ್ಲಿ ಅಶ್ವತ್ಥ ವೃಕ್ಷದ ಪೊಟರೆಯೊಳಗಿಂದ ಬಂದ ೧೬ ಕೈಗಳ ನರಸಿಂಹನಿದ್ದಾನೆ.

ಘಾಟಿ ಸುಬ್ರಹ್ಮಣ್ಯ ಮತ್ತು ಸುಳ್ಯದ ಕುಕ್ಕೆ ಸುಬ್ರಹ್ಮಣ್ಯ ಕ್ಷೇತ್ರಗಳಲ್ಲಿ ಶಿಲೆಯ ಮುಂಭಾಗದಲ್ಲಿ ಸುಬ್ರಹ್ಮಣ್ಯ ಹಿಂಭಾಗದಲ್ಲಿ ನರಸಿಂಹ ಮೂರ್ತಿ ಇದೆ. ಇದನ್ನು ನೋಡಲು ಹಿಂಬದಿಯಲ್ಲಿ ದೊಡ್ಡ ಕನ್ನಡಿ ಇಡಲಾಗಿದೆ.

ಆಂಧ್ರದ ಮಂಗಳಗಿರಿಯ ರಾಜಗೋಪುರ ಬಹಳ ಎತ್ತರವಾಗಿದೆ. ಪಾನಕ ನಿವೇದನೆಯಲ್ಲಿ ಅರ್ಧಭಾಗ ಸ್ವೀಕೃತವಾಗಿ ಇನ್ನರ್ಧ ಪ್ರಸಾದ ರೂಪವಾಗಿ ಉಳಿಯುವುದೇ ಪಾನಕ ನರಸಿಂಹನ ಮುಖ್ಯ ಆಕರ್ಷಣೆ. ಶೋಲಿಂಗರ್‌ನ ನರಸಿಂಹ ಬಹಳ ಫಲಕಾರಿ ಎಂದು ಪ್ರಸಿದ್ಧ. ಇದಕ್ಕೆ ಘಟಿಕಾಚಲ ಎಂದು ಹೆಸರು. ಪೀಡೆ ಪಿಶಾಚಿ ಹಿಡಿದಿರುವವರಿಗೆ ನಿವಾರಣೆ ಹಾಗೂ ಇತರ ಅಭೀಷ್ಟಗಳನ್ನು ನೆರವೇರಿಸುವಲ್ಲಿ ಶೋಲಿಂಗರ್ ಮೇಲುಕೋಟೆ ಕ್ಷೇತ್ರಗಳು ಪ್ರಸಿದ್ಧವಾಗಿದೆ. ಮೇಲುಕೋಟೆ ನರಸಿಂಹ ಸ್ವಾಮಿಯ ಶಾಂತ್ಯುತ್ಸವ ಹಾಗೂ ೫೦೦ ಮೆಟ್ಟಿಲುಗಳ ಮೇಲೆ ಕಾಯಿ ಒಡೆಯುವ ಮೆಟ್ಟಿಲು ಕಾಯಿ ಸೇವೆ ಬಹಳ ಪ್ರಸಿದ್ಧವಾಗಿದೆ.

ಅರಸರಿಂದ ದೇಣಿಗೆ :-- ನರಸಿಂಹ ಕ್ಷೇತ್ರಗಳಲ್ಲಿರುವ ಶಿಲಾ ಶಾಸನಗಳು ಇತಿಹಾಸದ ಮೇಲೆ ಬೆಳಕು ಚೆಲ್ಲಿವೆ. ಕ್ಷೇತ್ರಗಳು ತಮ್ಮವೇ ಆದ ಸ್ಥಳ ಪುರಾಣವನ್ನೊಳಗೊಂಡಿವೆ. ಆದರೆ ಸ್ಥಳ ಪುರಾಣಗಳಲ್ಲಿ ಕೆಲವು ದಂತ ಕಥೆಗಳು ಜೊಡಣೆಯಾದ ನಿದರ್ಶನಗಳಿವೆ. ಪಲ್ಲವರು, ಚೋಳರು ಚಾಲುಕ್ಯರು ಹಾಗೂ ಹೊಯ್ಸಳರು ಅನೇಕ ನರಸಿಂಹ ಕ್ಷೇತ್ರಗಳನ್ನು ನಿರ್ಮಾಣ ಮಾಡಿದ್ದಾರೆ. ವಿಜಯ ನಗರದ ಅರಸರು ಶಿಥಿಲವಾದ ದೇವಾಲಯಗಳನ್ನು ಜೀರ್ಣೋದ್ಧಾರಗೊಳಿಸಿದ್ದಾರೆ. ನರಸಿಂಹ ಕ್ಷೇತ್ರಗಳ ಅಭಿವೃದ್ಧಿಗೆ ಮೈಸೂರ ರಾಜರ ಕೊಡುಗೆ ಅಪಾರ. ದೇವರಾಯನದುರ್ಗವು ಚಿಕ್ಕ ದೇವರಾಜ ಒಡೆಯರ ಕಾಣಿಕೆ. ಮೇಲುಕೋಟೆಯ ಯೋಗ ನರಸಿಂಹನಿಗೆ ಮುಮ್ಮಡಿಯವರ ರಾಣಿ ಬಂಗಾರದ ತುರಾಯಿ, ಕಿರೀಟ ಮಾಡಿಸಿದ್ದಾರೆ.

ಟೀಪು ಸುಲ್ತಾನನು ಮೇಲುಕೋಟೆಯ ಯೋಗ ನರಸಿಂಹ ಸ್ವಾಮಿಗೆ ಖಿಲ್ಲತ್ತುಗಳನ್ನು ನೌಬತ್ ನಗಾರಿಗಳನ್ನು ಸಮರ್ಪಿಸಿದ್ದಾನೆ. ಶೀಬೀ ಕ್ಷೇತ್ರಕ್ಕೂ ಇವನಿಂದ ಪುರಸ್ಕಾರ ದೊರೆಯಿತು. ಶಾಂತಿ ಗ್ರಾಮವನ್ನು ಶಾಂತಲಾದೇವಿಯೂ, ನುಗ್ಗೇ ಹಳ್ಳಿ ಕ್ಷೇತ್ರವನ್ನು ದೊಮ್ಮಣ್ಣ ದಂಡನಾಯಕನು ಶ್ರೀರಂಗಪಟ್ಟಣದ ನರಸಿಂಹ ದೇವಾಲಯವನ್ನು ರಣಧೀರ ಕಂಠೀರವ ನರಸಿಂಹರಾಜ ಒಡೆಯರು, ಮಾರೆಹಳ್ಳಿಯನ್ನು ಚೋಳರು ಕಟ್ಟಿಸಿದರೆಂದು ಚರಿತ್ರೆ ತಿಳಿಸುತ್ತದೆ.

❋❋❋❋❋❋❋❋❋❋❋❋❋❋

# ನಮ್ಮಾಳ್ವಾರ್

ಆಂಗ್ಲಮೂಲ --- ಡಾ|| ವಿ. ವರದಾಚಾರಿ.

ಅನುಭಾವಿಗಳು ಹುಟ್ಟುತ್ತಾರೆ; ಆಗುವುದಿಲ್ಲ. ಹಾಗಾಗಿ ಅವರಿಗೆ ಅನುಭಾವಿಗಳಾಗಲು ಯಾವುದೇ ಅಭ್ಯಾಸ, ತರಬೇತಿ ಬೇಕಾಗದು. ಅವರಿಗೆ ದೇವರಲ್ಲಿಯೂ ಅವನ ದಯೆಯಲ್ಲಿಯೂ ಅಚಂಚಲ ವಿಶ್ವಾಸ. ದೈವಸಾಕ್ಷಾತ್ಕಾರಕ್ಕೆ ಸಾಧಕವಾಗುವ ಶಿಕ್ಷಣ ತರಬೇತಿ ಸಾಧನೆಗಳನ್ನು ಅನುಸರಿಸಿ ದೈವಭಕ್ತರಾದವರು ತಮ್ಮಲ್ಲಿರಬಹುದಾದ ಐಹಿಕ ಆಸೆ ಆಕಾಂಕ್ಷೆಗಳನ್ನು ದೈವಾನುಗ್ರಹದಿಂದ ಪೂರೈಸಿಕೊಳ್ಳಬಯಸಬಹುದು, ಆದರೆ ಅನುಭಾವಿಗೆ ಇತರೇತರ ಆಸಕ್ತಗಳಲ್ಲಿ ಆಕರ್ಷಣೆಯೇ ಇರದು, ದೈವದಲ್ಲಿ ಐಕ್ಯವಾಗುವ ತಪನೆಯನ್ನು ಬಿಟ್ಟರೆ. ಇಂತಹವರಿಗೆ ಇವರು ಇಷ್ಟಪಟ್ಟಂತೆ ದೇವರು ತನ್ನನ್ನು ತಾನು ತೋರಿಸಿಕೊಡುತ್ತಾನೆ. ಅನುಭಾವಿ ಇಂತಹ ಭೂಮಾನುಭವದಿಂದ ಆನಂದ ತುಂದಿಲನಾಗುತ್ತಾನೆ.

ನಮ್ಮಾಳ್ವಾರ್ ಒಬ್ಬ ಶ್ರೇಷ್ಠ ಅನುಭಾವಿ. ತನ್ನ ಎರಡೂ ದಡದ ಭೂಮಿಯನ್ನು ಫಲಭರಿತಗೊಳಿಸುವ, ಮುತ್ತುಗಳಿಂದ ಕೂಡಿದ ತಾಮ್ರಪರ್ಣಿ ನದಿಯ ದಕ್ಷಿಣ ದಂಡೆಯ ಕುರುಗೂರಿನಲ್ಲಿ ಜನಿಸಿದವರು. ಆ ಗ್ರಾಮದಲ್ಲಿ ವಿಷ್ಣು ಭಕ್ತಿಯಲ್ಲಿ ಏಳು ತಲೆಮಾರು ಜೀವ ಸವೆಸಿದ ಒಂದು ಮನೆತನವಿತ್ತು. ತಿರುವಳುತಿನಾಥರ್, ಅರಂತಂಕಿಯರ್, ಚಕ್ರಪಾಣಿಯರ್, ಅಚ್ಯುತರ್, ಸೆಂತಾಮರೈಕಣ್ಣನ್, ಚೆಂಕಣ್ಣನ್, ಪೊರ್‌ಕರಿಯರ್, ಹಾಗೂ ಕರಿಯರ್ -- ಈ ತಂದೆ ಮಕ್ಕಳ ವಂಶವೃಕ್ಷವನ್ನು ನೆನೆಯುವುದುಂಟು.

ಪುರಾಣಗಳಲ್ಲಿ ಕಂಡುಬರುವ ಒಂದು ಸಂಘಟನೆಯಿಂದ ಕುರುಗೂರು ಎಂಬ ಹೆಸರು ಬಂದಿದೆ. ಅದರಂತೆ ಒಮ್ಮೆ ಬ್ರಹ್ಮನು ವಿಷ್ಣುವನ್ನು ಪೂಜಿಸಲು ಪವಿತ್ರವಾದ ಸ್ಥಳ ಬೇಕೆಂದಾಗ ವಿಷ್ಣುವೇ ತಾಮ್ರಪರ್ಣಿ ನದೀ ತೀರದ ಆದಿನಾಥನ ದೇವಾಲಯವನ್ನು ನಿರ್ದೇಶಿಸಿದನು. ಬ್ರಹ್ಮನು ಹಾಗೆಯೇ ಮಾಡಿ, ಆದಿನಾಥನ ಆಶೀರ್ವಾದ ಪಡೆದು ಸ್ವಸ್ಥಳಕ್ಕೆ ಹಿಂದಿರುಗಿದ. ವಿಷ್ಣುವು ಬ್ರಹ್ಮನಿಗೆ ಇಲ್ಲಿ ಗುರುವಾದದ್ದರಿಂದ ಈ ಊರಿಗೆ ಗುರುವೂರು - ಕುರುಗೂರು - ಎಂದು ಹೆಸರಾಯಿತು. ಸ್ಥಳ ಪ್ರಸಿದ್ಧವಾಗಿ ಮುಂದೆ ನಮ್ಮಾಳ್ವಾರರ ನಂತರ ತಿರುನಗರಿಯೆಂದಾಯಿತು.

ಒಬ್ಬ ವ್ಯಕ್ತಿಯಲ್ಲಿ - ವಿಶೇಷವಾಗಿ ಭಗವಂತನಲ್ಲಿ - ಶ್ರದ್ಧೆ ಹೆಚ್ಚಾಗಿದ್ದಾಗ ಭಕ್ತಿ ಎನ್ನಿಸುತ್ತದೆ. ಭಕ್ತಿ ತೀವ್ರವಾಗಿದ್ದಾಗ ಭಕ್ತ ತನ್ನ ಐಹಿಕ, ವ್ಯಕ್ತಿಗತವಾದ ಆಸೆ ಆಕಾಂಕ್ಷೆಗಳ ಈಡೇರಿಕೆಗಾಗಿ ಮನುಷ್ಯಮಾತ್ರರನ್ನು ನೆರವನ್ನು ನಿರಾಕರಿಸುತ್ತಾನೆ. ಆತನ ಸರ್ವೋತ್ಕೃಷ್ಟ ಅಭೀಪ್ಸೆಯೆಂದರೆ ದೇವರ ದಯೆಯಿಂದ ದೈವಕ್ಕೆ ಪ್ರಿಯವಾಗುವಂತಹ ಧಾರ್ಮಿಕ ಜೀವನವನ್ನು ನಡೆಸುವುದೇ ಆಗಿರುತ್ತದೆ. ಕರಿಯಾರರು ಯುಕ್ತ ವಯಸ್ಕರಾದಾಗ ಅವರಿಗೆ ಅರ್ಹವಾದ ಹೆಣ್ಣನ್ನು ತಮಿಳುನಾಡಿನ ನಾಗರ ಕೋಯಿಲ್ (ತಿರುನಲ್ವೇಲಿ ಜಿಲ್ಲೆ) ಬಳಿಯ ತಿರುವಂಪರಿಕಾರಂನಲ್ಲಿದ್ದ ಒಂದು ಧಾರ್ಮಿಕ ಮನೆತನದಲ್ಲಿ ಅವರ ತಂದೆ ನೋಡಿದರು. ಮಗನೊಡನೆ ತಿರುವಂಪರಿಕಾರಕ್ಕೆ ಬಂದರು. ಇಲ್ಲಿನ ದೈವ ತಿರುವಲಮರ್ಪನ್. ಈ ಹೆಸರು (ವಕ್ಷಃಸ್ಥಲದಲ್ಲಿ ಲಕ್ಷ್ಮಿ ಇರುವಾತ) ತಿರುಮಲೆಯ ಶ್ರೀನಿವಾಸನ ಹೆಸರಿನೊಡನೆ ಸಾಮ್ಯ ಹೊಂದಿದ್ದು ತಿರುವಂಪರಿಕಾರವನ್ನು ಈಗ ತಿರುಪತಿಕಾರಂ ಎಂದು ಕರೆಯಲಾಗುತ್ತಿದೆ. ಪೊರ್ಕರಿಯಾರ್ ತಮ್ಮ ಸೊಸೆಯಾಗಬಯಸಿದ ಉಡ್ಯೆಯ ನಂಗೈಯಾರ್‌ಳ ತಂದೆಯ ಹೆಸರು ಆ ದೇವರದೇ ಆಗಿದ್ದಿತು. ಪೊರ್ಕರಿಯಾರ್ ತಮ್ಮ ಆಕಾಂಕ್ಷೆಯನ್ನು ವ್ಯಕ್ತಪಡಿಸಿದಾಗ ತಿರುವಲಮರ್ಪನ್‌ಗೆ ಇದರಲ್ಲಿ ಭಗವಂತನ ಕೈವಾಡವೇ ಕಾಣಿಸಿತು. ಪೊರ್ಕರಿಯಾರರ ಮಗ ಕರಿಯಾರರಿಗೆ ತಮ್ಮ ಮಗಳನ್ನು ನೀಡಲು ಆತ ಕೂಡಲೇ ಒಪ್ಪಿದರು. ವಿಜೃಂಭ



ಜೂನ್ ತಿಂಗಳಿನಲ್ಲಿ 2 ರಿಂದ 11 ರವರೆಗೆ ನಮ್ಮಾಳ್ವಾರರ ಉತ್ಸವ ನಡೆಯುತ್ತದೆ. ಶಠಗೋಪರೆಂದು ಪ್ರಸಿದ್ಧರಾಗಿ, ತಿರುವಿರತ್ತಂ, ತಿರುವಾಶಿರಿಯಂ, ಪೆರಿಯ ತಿರುವಂದಾದಿ, ತಿರುವಾಯ್ಮೊಳಿ ಕೃತಿಗಳನ್ನು ಹಾಡಿ ಮತ್ತೊಂದನ್ನು ಅಪೇಕ್ಷಿಸದೆ ಹುಣಿಸೆಯ ಮರದಡಿಯಲ್ಲಿ ಜೀವನವನ್ನು ಕಳೆದ ಅವರ ನೆನಪಿನಲ್ಲಿ ಈ ಲೇಖನ. ಪಾಂಡಿಚೆರಿಯ ಫ್ರೆಂಚ್ ಇನ್‌ಸ್ಟಿಟ್ಯೂಟ್‌ನ ಪ್ರಾಚಾರ್ಯ ವಿ. ವರದಾಚಾರಿ ಅವರು ಬರೆದ ಕಿರುಹೊತ್ತಿಗೆಯ ಕನ್ನಡಾನುವಾದ.

## ಸಪ್ತಗಿರಿ
## ಬರಹಗಾರರಿಗೆ ಸೂಚನೆ :

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್ಸ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ.

ಣೆಯಿಂದ ವಿವಾಹವಾದ ಮೇಲೆ ನೂತನ ದಂಪತಿಗಳು ಕೆಲಕಾಲ ಅಲ್ಲಿಯೇ ಇದ್ದು ಕುರುಗೂರಿಗೆ ಹಿಂದಿರುಗಿದರು.

ಕೆಲಕಾಲಾನಂತರ ತಿರುವಲಮರ್ಪನ್ ಅವರ ಆಹ್ವಾನದ ಮೇರೆಗೆ ಮತ್ತೆ ಆ ಗ್ರಾಮಕ್ಕೆ ಬಂದ ಮಕ್ಕಳಿಲ್ಲದ ಕರಿಯಾರ್ ದಂಪತಿಗಳು ಅಲ್ಲಿಯೇ ಬಳಿಯ ದೆಟ್ಟದಲ್ಲಿದ್ದ ಶ್ರೀ ನಂಬಿದೇವರನ್ನು ಮಕ್ಕಳಿಗಾಗಿ ಪ್ರಾರ್ಥಿಸಿದಾಗ, ಸ್ವಾಮಿ ತಾನೇ ಅವರ ಮಗನಾಗಿ ಜನಿಸುವುದಾಗಿ ಭರವಸೆ ನೀಡಿದ.

ಸಂತಸದಿಂದ ಕುರುಗೂರಿಗೆ ಹಿಂದಿರುಗಿದ ದಂಪತಿಗಳು ದೈವದ ಆಗಮನದಲ್ಲಿ, ನಿರೀಕ್ಷೆಯಲ್ಲಿರಲು ಗರ್ಭಿಣಿಯಾದ ಉಡೈಯನಂಗೈಯಾರ್ ಗಂಡುಕೂಸಿಗೆ ಜನ್ಮವಿತ್ತಳು. ಆ ಮಗುವು ಹುಟ್ಟಿದ ಬಗ್ಗೆ ಗುರುಪರಂಪರೆಯಿಂದ ತಿಳಿಯುವುದಿಷ್ಟು ಬಹುಧಾನ್ಯ ಸಂವತ್ಸರ, ವೈಶಾಖಮಾಸ, ಕರ್ಕಾಟಕ ಲಗ್ನ, ವಿಶಾಖಾ ನಕ್ಷತ್ರ, ಪೂರ್ಣಿಮೆಯಂದು ಶುಕ್ರವಾರ.

ಮಗು ಹುಟ್ಟಿದಾಗ ಅಳಲಿಲ್ಲ. ಸ್ತನ್ಯಪಾನಮಾಡಲಿಲ್ಲ. ಕಣ್ಣು ತೆರೆಯಲಿಲ್ಲ. ಆದರೂ ಕೃಷಕಾಯವಾಗಲಿಲ್ಲ. ಇದರಿಂದಾಗಿ ತಾಯ್ತಂದೆಗಳಿಗೆ ಕಾತರ, ದುಮ್ಮಾನಗಳುಂಟಾದರೂ ದೈವದಲ್ಲಿನ ಅವರ ಅಚಲ ಶ್ರದ್ಧೆಯಿಂದಾಗಿ, ದೇವರು ಮಾಡಿಸಿದಂತಾಗಲಿ ಎಂಬ ಭರವಸೆ ಹೊಂದುವಂತಾಯಿತು.

ಆದಿಶೇಷನೇ ಆ ಗ್ರಾಮಕ್ಕೆ ಇಳಿದುಬಂದು ಹುಣಿಸೇ ಮರದ ರೂಪದಲ್ಲಿ ಮಗುವಿಗೆ ಬಿಸಿಲು ಮಳೆಗಳಿಂದ ತೊಂದರೆಯುಂಟಾಗದಂತೆ ನೋಡಿಕೊಂಡ. ವೈಷ್ಣವ ಭಾಷೆಯಲ್ಲಿ ಆ ಮರವನ್ನು ತಿರುಪ್ಪುಳ್ಳಿಯಾಳ್ವಾರ್ ಎಂದು ಗುರುತಿಸಲಾಗುತ್ತದೆ. ದೇವಾಲಯದ ಹೊರಾಂಗಳದಲ್ಲಿ ಬೆಳೆದು ನಿಂತಿರುವ ಈ ಮರವನ್ನು ಜನ ಇಂದಿಗೂ ಆರಾಧಿಸುತ್ತಾರೆ. ಇದು ಬೆಳೆಯುತ್ತ ಬೆಳೆಯುತ್ತ ಹೊರ ಅಂಗಳವೆನ್ನೆಲ್ಲ ತನ್ನ ಏಳು ಕಾಂಡಗಳಿಂದ ಆವರಿಸಿ ಗರ್ಭಗುಡಿಯ ವಿಮಾನದ ಒಂದು ಭಾಗವನ್ನೂ ಆಕ್ರಮಿಸಿದೆ.

ಸಾಧಾರಣ ಮಕ್ಕಳಿಗಿಂತಲೂ ಭಿನ್ನವಾದ ನಡಾವಳಿಯ ಈ ಮಗುವನ್ನು ಹನ್ನೆರಡನೆಯ ದಿನ ಆದಿನಾಥ ದೇವಾಲಯಕ್ಕೆ ಕರೆದುಕೊಂಡು ಹೋಗಿ ಮಾರನ್ ಎಂದು ಹೆಸರಿಡಲಾಯಿತು. ಮಗುವು ತನ್ನ ಸ್ಥಳವನ್ನು ಬಿಟ್ಟು ಹುಣಿಸೆಯ ಮರದ ಕೆಳಕ್ಕೆ ಸರಿದುಬಂದು ಕುಳಿತಿತು. ತಾಯ್ತಂದೆಯರು ಒಂದು ಚಿನ್ನದ ತೊಟ್ಟಿಲನ್ನು ತಂದು ಮರದ ಕೊಂಬೆಗೆ ತೂಗುಬಿಟ್ಟರು. ಆದರೂ ಮಗುವು ಹುಣಿಸೆಯ ಮರದಡಿಯಲ್ಲಿಯೇ, ಹಸಿವು ಬಾಯಾರಿಕೆಗಳ ಯಾವುದೇ ಗುರುತನ್ನೂ ತೋರಿಸದೆ ಕುಳಿತ್ತಿದ್ದಿತು.

ಮಾರನ್ ಅಲ್ಲಿಯೇ ಹದಿನಾರು ವರ್ಷವಿದ್ದರು. ಪುರಾಣಗಳು ಹೇಳುವಂತೆ ದೈವಾಜ್ಞೆಯಂತೆ ವಿಶ್ವಕ್ಸೇನರು ಮಾರನ್ ಅವರ ಬಳಿಗೆ ಬಂದು ವೈಷ್ಣವ ಸಿದ್ಧಾಂತದ ಸಾರವನ್ನು ಉಪದೇಶಗೈದರು. ದೈವವೇ ಕರಿಯಾರರಿಗೆ ತಾನೇ ಪುತ್ರನಾಗಿ ಹುಟ್ಟುವೆ ಎಂದು ಹೇಳಿದ್ದರಿಂದ ದೈವವೇ ಮಾರನ್ ರೂಪದಲ್ಲಿ ಅವತರಿಸಿರಬೇಕು ಎಂದಾಯಿತು. ಹಾಗಾಗಿ ಅವರಿಗೆ ಎಲ್ಲವೂ ತಿಳಿದಿರಬೇಕಲ್ಲವೇ ಎಂದರೆ, ಪ್ರತಿಯೊಬ್ಬರಿಗೂ ಪವಿತ್ರ ಪರಂಪರಾ ಉಪದೇಶ ಆಗಲೇಬೇಕು. ಹಾಗಾಗಿ ವಿಶ್ವಕ್ಸೇನರು ಮಾರನರಿಗೆ ಉಪದೇಶ ನೀಡಿದರು. ಪರಂಪರೆಯು ಮಾರನರ ಗುರುವೆಂದು ವಿಶ್ವಕ್ಸೇನರನ್ನು ಗುರುತಿಸಿದೆ. ಇದಕ್ಕೆ ಆಧಾರಸಂಗತಿಯೂ ಉಂಟು.

ಭಾರತದಲ್ಲಿ ಸನಾತನಧರ್ಮಾನುಯಾಯಿಗಳಲ್ಲಿರುವ ನಂಬಿಕೆಯೆಂದರೆ ಮಗು ಹುಟ್ಟುವಾಗಲೇ ತನ್ನ ಪ್ರಕೃತಿ, ಸ್ಥಾನ, ಪ್ರೌಢಿಮೆ, ಇಲ್ಲಿನ ಜೀವನದ ತೊಡಕುಗಳು ಎಲ್ಲವನ್ನೂ ತಿಳಿದು, ಹುಟ್ಟಿದ ನಂತರ ಎಲ್ಲವನ್ನೂ ನಿಯಂತ್ರಿಸಿ, ತೊಡಕುಗಳನ್ನು ನಿವಾರಿಸಿಕೊಂಡು, ಧರ್ಮಾನುಸಾರ ಜೀವನ ಸಾಗಿಸಲು ಪ್ರತಿಜ್ಞೆಮಾಡಿದರೂ, ಜನನಕಾಲದಲ್ಲಿ ಶಠವೆಂಬ ವಾಯು ಮಗುವಿನ ಎಲ್ಲ ಬುದ್ಧಿಯನ್ನೂ ಸೆಳೆದುಕೊಳ್ಳುವುದರಿಂದ ಮಗು ಜ್ಞಾನಶೂನ್ಯತೆ ಹೊಂದಿರುತ್ತದೆ. ಈ ಶಠವಾಯು ಬಳಿಬಂದಾಗ ಅದು ತನ್ನ ಅರಿವು ಪ್ರಜ್ಞೆಗಳನ್ನು ಹರಿಸುವುದನ್ನು ಮಾರನರು ನಿರೋಧಿಸಿರಬೇಕು -- ಇಲ್ಲವಾದಲ್ಲಿ ಮಗು ಈ ರೀತಿ ಬದುಕುವುದೇ ಅಸಾಧ್ಯವಾಗಿ ವಿವರಿಸಲಾಗದ ವಿಷಯವಾಗುತ್ತದೆ. ಪರಂಪರೆ ಮಾರನರನ್ನು -- ಶಠವನ್ನೋಡಿಸಿದವರು -- ಶಠಗೋಪರು ಎಂದು ಕರೆದಿದೆ. ಈ ಹೆಸರಿನ ವೈಶಿಷ್ಟ್ಯ, ದೈವವೇ ಮಾರನ್ ರೂಪದಲ್ಲಿ ಅವತರಿಸಿದ್ದು, ವಿಶ್ವಕ್ಸೇನ ಉಪದೇಶ ಮೊದಲಾದವು -- ಮಾರನರು ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಮಧುರಕವಿ ಆಳ್ವಾರರ ಪರಿಪ್ರಶ್ನೆಯ ಉತ್ತರವಾಗಿ ನೀಡಿದ ಉಪದೇಶ -- ಅವರ ಸರ್ವಜ್ಞತ್ವವನ್ನು ಪ್ರತಿಬಿಂಬಿಸುತ್ತದೆ.

## ಮಧುರಕವಿ ಆಳ್ವಾರ್ :

ತಾಮ್ರಪರ್ಣಿನದಿಯ ದಕ್ಷಿಣದಡದಲ್ಲಿ ತಿರುನಗರಿಗೆ ಎರಡು ಮೈಲಿ ದೂರದ ತಿರುಕ್ಕೋ

ಊರಿನಲ್ಲಿ ಮಧುರಕವಿಗಳು ಜನಿಸಿದರು (ಕ್ರಿ.ಶ. .೯೭-೮೫೨). ಸಾಮವೇದಾಧ್ಯಯನದ ಬ್ರಾಹ್ಮ ರು ಅವರು. ವೇದಗಳನ್ನೂ ವೇದಾಂಗ, ಶಾಸ್ತ್ರ ಳನ್ನು ಚೆನ್ನಾಗಿ ಅಭ್ಯಾಸ ಮಾಡಿದವರು. ಅವರು ಉತ್ತರ ಭಾರತದ ತೀರ್ಥಯಾತ್ರೆ ಕೈಗೊಂಡರು. ಂದು ರಾತ್ರಿ ಅವರು ತಮ್ಮ ಜನ್ಮಸ್ಥಳ ತಿರುಕ್ಕೋ ಊರನ್ನು ನೆನೆಯುತ್ತ ದಕ್ಷಿಣದಿಕ್ಕಿನತ್ತ ನೋಡಿದಾಗ ಕಾಶದಲ್ಲಿ ಒಂದು ಪ್ರಕಾಶಮಾನವಾದ ಬೆಳಕು ಂಡುಬಂದಿತು. ಅದರ ಮೂಲವನ್ನು ತಿಳಿಯುವ ಯಕೆಯಾಯಿತು ಅವರಿಗೆ. ಅಯೋಧ್ಯೆಯನ್ನು ಬಿಟ್ಟು ಆ ಬೆಳಕಿನ ಮೂಲವನ್ನು ಸೇರಲು ದಕ್ಷಿಣ ನತ್ತ ನಡೆದರು. ಕುರುಗ್ಯೆನ ಹುಣಿಸೇ ಮರದ ಡಿಯ ಮಾರನರ ಬಳಿ ಸೇರಿದರು. ಅಲ್ಲಿ ಬೆಳಕು ಮಾಯವಾಯಿತು. ಜನ ಹುಣಿಸೇ ಮರದಡಿಯಲ್ಲಿ ಕುಳಿತಿದ್ದ ಮಗುವಿನ ಬಗ್ಗೆ ತಿಳಿಸಿದಾಗ ಅವರಿಗೆ ಆಶ್ಚರ್ಯ. ಒಂದು ಸಣ್ಣ ಕಲ್ಲನ್ನೆತ್ತಿ ಮಗುವಿನ ದಿಕ್ಕಿನಲ್ಲಿ ಎಸೆದರು. ಮಾರನರು ತಮ್ಮ ಮುಂದೆ ಕಲ್ಲು ಬಿದ್ದ ಶಬ್ದಕೇಳಿ ಕಣ್ಣು ತೆರೆದು ನೋಡಿದರಾದರೂ ಮಾತನಾಡಲಿಲ್ಲ. ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಮಾರನರು ಸತ್ಯ ಸಾಕ್ಷಾತ್ಕಾರದ ಬಗ್ಗೆ ತಮ್ಮ ಚಿಂತನೆಯನ್ನು ಪೂರ್ತಿಗೊಳಿಸಿರಬೇಕು. ಇಲ್ಲದಿದ್ದಲ್ಲಿ ಕಣ್ಣು ತೆರೆಯದೆಯೇ ಇರುತ್ತಿದ್ದರು.

ಮಧುರಕವಿಗಳಿಗೆ ಸಂದೇಹ -- ಈತ ಮೂಗರೊ? ಮಾತುಬಲ್ಲವರೊ? ಒಂದು ಪ್ರಶ್ನೆಯನ್ನೆಸೆದರು. "ಬಹುಕಿರಿದಾಗಿ ಜನಿಸಿ ಸಾಯುವುದು ಏನು ತಿಂದು ಎಲ್ಲಿರುತ್ತದೆ?", "ಅದನ್ನೇ ತಿಂದು ಅಲ್ಲಿಯೇ ಇರುತ್ತದೆ" --ಎಂಬ ಉತ್ತರ ಬಂದಿತು. ಮಾರನರ ಉತ್ತರ ಮಧುರಕವಿಗೆ ಅರ್ಥವಾದದ್ದು ಹೀಗೆ -- ಸೂಕ್ಷ್ಮತಮವಾದ ಆತ್ಮ ಪ್ರಾಕೃತಿಕವಾದ ದೇಹವನ್ನು ಪ್ರವೇಶಿಸಿ ಪೂರ್ವಾರ್ಜಿತ ಕರ್ಮವಿಪಾಕವನ್ನು ಅನುಭವಿಸುತ್ತ ಆ ದೇಹದಲ್ಲಿರುತ್ತದೆ. ಜನನವೆಂದರೆ ಆತ್ಮಕ್ಕೆ ದೇಹದ ಸಂಪರ್ಕ. ಇದರಿಂದಲೇ ಪೂರ್ವಕೃತ ಕರ್ಮಫಲ ಪರಿಮಾರ್ಜನೆಯಾಗುವವರೆಗೆ ಇದು ಮುಂದುವರಿಯುತ್ತದೆ. ಮಧುರಕವಿಗಳಿಗೆ ಈ ತತ್‌ಕ್ಷಣದ ಉತ್ತರದಿಂದ ಮೂಕವಿಸ್ಮಯ. ಮಾರನರ ಉತ್ತರದ ಮರ್ಮ ಮಧುರಕವಿಗಳ ಅಸಾಧಾರಣ ವಿದ್ವತ್‌ಗೆ ಹೊಳೆಯಿತು. ಯೋಚಿಸಿ ಹೇಳಿದ ಉತ್ತರವಾಗಿರಲಿಲ್ಲವಾಗಿ ಮಾರನರು ಸಾಧಾರಣ ವಿದ್ವಾಂಸರಂತಲ್ಲದೆ ಸಾಧಾರಣ ಜನರಂತಲ್ಲದೆ ಅಸಾಧಾರಣ ಸಂತರಂತೆ ಕಂಡುಬಂದರು. ಸಾಷ್ಟಾಂಗ ನಮಸ್ಕಾರ ಮಾಡಿ ತನ್ನನ್ನು ಶಿಷ್ಯನಾಗಿ ಸ್ವೀಕರಿಸಬೇಕೆಂದು ಬೇಡಿದರು.

## ಕೃತಿ ವಿಶೇಷ :

ಮಾರನರು ಮಧುರಕವಿಗಳಲ್ಲಿ ನಿಜವಾದ ಆಸಕ್ತಿಯಿರುವ ಶಿಷ್ಯನನ್ನು ಕಂಡು ಸತ್ಯದ ಸ್ವರೂಪ,



ಆಳ್ವಾರ್ ತಿರುನಗರಿ ಆದಿನಾಥ ದೇವಾಲಯ

ಅದರ ಸಾಕ್ಷಾತ್ಕಾರದ ಸಾಧನೆ, ಮೋಕ್ಷಸ್ವರೂಪಗಳನ್ನು ತಿಳಿಸಿದರು. ಅವರ ಈ ಉಪದೇಶವೇ ನಾಲ್ಕು ಸಂಪುಟಗಳಾಗಿ -- ತಿರುವಿರತ್ತಂ, ತಿರುವಾಶಿರಿಯಂ, ಪೆರಿಯ ತಿರುವಂದಾದಿ, ಹಾಗೂ ತಿರುವಾಯ್ಮೊಳಿ - ಆಗಿ ನಮಗೆ ದೊರೆತಿದೆ.

ಪರಂಪರೆಯಲ್ಲಿ ಇವುಗಳನ್ನು ಋಗ್ವೇದ, ಯಜುರ್ವೇದ, ಅಥರ್ವವೇದ, ಹಾಗೂ ಸಾಮವೇದಗಳ ಸಾರವೆಂದು ಬಗೆಯಲಾಗಿದೆ. ಇವುಗಳನ್ನು ಇನ್ನೊಂದು ರೀತಿಯಲ್ಲಿಯೂ ಭಾವಿಸಬಹುದು. ವೇದಗಳನ್ನು ಎರಡು ಭಾಗಗಳನ್ನಾಗಿ - ಕರ್ಮಕಾಂಡ (ಸಂಹಿತೆಗಳು, ಬ್ರಾಹ್ಮಣಗಳು) ಜ್ಞಾನಕಾಂಡ (ಆರಣ್ಯಕ) ಉಪನಿಷತ್ತುಗಳೆಂದು ತಿಳಿಯಲಾಗಿದೆ. ಕರ್ಮಕಾಂಡವು ಕರ್ಮವನ್ನು ಕುರಿತಾದರೆ ಜ್ಞಾನ



ತಿರುಪ್ಪುಳಿಯಾಳ್ವಾರ್ ಸನ್ನಿಧಿ

ಕಾಂಡವು ಸ್ಥೂಲವಾಗಿ ಜ್ಞಾನ ಭಕ್ತಿಗಳನ್ನು ಒಳಗೊಂಡಿದೆ. ಆದರೂ ಭಕ್ತಿಗೆ ತಕ್ಕ ಅವಕಾಶ ವಿವರ ದೊರೆತಿಲ್ಲ. ಆದರೆ ಆಳ್ವಾರರ ನಾಲಾಯಿರ ಪ್ರಬಂಧಗಳಾದರೂ ವಿಶೇಷವಾಗಿ ಮಾರನರ ನಾಲ್ಕು ಕೃತಿಗಳೂ ಭಕ್ತಿಯನ್ನು ಮಾತ್ರವೇ ವಿವರಿಸುತ್ತವೆ. ಹೀಗಾಗಿ ಮಾರನರ ನಾಲ್ಕು ಕೃತಿಗಳೂ ನಾಲ್ಕು ವೇದಗಳಲ್ಲಿನ ಭಕ್ತಿ ವಿವರಸಾರ ಎಂದು ಹೇಳಬಹುದು. ಉಪನಿಷತ್ತುಗಳಲ್ಲಿ ದೊರೆಯದಷ್ಟು ವಿವರ ಪೂರ್ಣವಾದ ಭಕ್ತಿಯು ಮಾರನರ ನಾಲ್ಕು ಕೃತಿಗಳಲ್ಲಿ ದೊರೆಯುತ್ತದೆ ಎಂದು ಸಹ ಹೇಳಬಹುದು. ತಮಿಳು ಭಾಷೆಯಲ್ಲಿರುವ ವೇದಗಳ ನಿರ್ಣಾಯಕ, ಅಂತಿಮ ಭಾಗಗಳೆಂದು ಇವನ್ನು ಗುರುತಿಸಲಿಕ್ಕುಂಟು. ಹೀಗಾಗಿ ತಿರುವಿರತ್ತಂ ಋಗ್ವೇದದ ಉಪನಿಷತ್ತುಗಳ ಸಾರವನ್ನು ಹೊಂದಿದೆ. ಯಜುರ್ವೇದದ ಉಪನಿಷತ್ತುಗಳ ಸಾರ ತಿರುವಾಶಿರಿಯಂ, ಅಥರ್ವವೇದದ ಉಪನಿಷತ್ತುಗಳ ಸಾರ ಪೆರಿಯ ತಿರುವಂದಾದಿಯಾದರೆ ಸಾಮವೇದದ ಉಪನಿಷತ್ತುಗಳ ವಿಶೇಷವಾಗಿ ಛಾಂದೋಗ್ಯದ ಸಾರವೇ ತಿರುವಾಯ್ಮೊಳಿಯಾಗಿದೆ.

ಈ ಕೃತಿಗಳ ಹಲವು ಲಕ್ಷಣಗಳೆಂದರೆ - ಇವೆಲ್ಲ ಪಾಶುರಗಳೂ ಪದ್ಯರೂಪದಲ್ಲಿದ್ದು ದೇವರ ಅನಂತಗುಣಗಳನ್ನೂ, ದಯೆಯನ್ನೂ, ಅವನ ಅವತಾರಗಳ ಸುಂದರ ರೂಪವನ್ನೂ, ಅವನ ಅರ್ಚಾವಿಗ್ರಹಗಳ ಮನಮೋಹಕ ಗುಣಗಳನ್ನೂ ವರ್ಣಿಸುತ್ತವೆ. ದೇವರ ಸರ್ವವ್ಯಾಪಕತೆ, ಸರ್ವಶಕ್ತತೆಗಳು ತಕ್ಕ ಸ್ಥಳ ಪಡೆದಿವೆ.

ಈ ಪಾಶುರಗಳಿಗೆಲ್ಲ ಪ್ರಾಧಾನ್ಯವನ್ನು ತಂದುಕೊಡುವ ಒಂದು ಮುಖ್ಯ ಅಂಶವೆಂದರೆ ಇಲ್ಲಿನ ನಾಯಿಕಾಭಾವವನ್ನು ಬಿಂಬಿಸುವ ಅನುಭಾವ.

ಹಲವೆಡೆ ಪ್ರಿಯಳಾಗಿ, ಸಖಿಯಾಗಿ, ಅವಳ ತಾಯಿಯಾಗಿ, ಪೊರಪೊಮ್ಮನ ಅನುಭಾವ ಎರಡು ರೀತಿಯಲ್ಲಿ ಲಾಭಕಾರಿ. ಸತಿಪತಿ ಭಾವದಿಂದ ಮಾತ್ರವೇ ಮನುಷ್ಯಪರಮಾತ್ಮರ ಸಂಬಂಧದ ಹಿರಿಮೆಯನ್ನು ತಿಳಿಯಲಾಗುತ್ತದೆ. ಎರಡನೆಯದಾಗಿ ಈ ಸತಿಪತಿ ಭಾವ ಪ್ರವೇಶದಿಂದ ಗೀತೆಯಲ್ಲಿನ ಏಕಧಾಟಿ ಬದಲಾಗಿ, ವೈಯಕ್ತಿಕ ಭಾವಕ್ಕೆ ಪೂರಕತೆಯೊದಗುತ್ತದೆ.

ತಿರುವಿರತ್ತಂ ಒಂದು ನೂರು ಛಂದೋಬದ್ಧ ಪಾಶುರಗಳನ್ನು ಹೊಂದಿದೆ. ವಿರತ್ತಂ ಎಂಬುದು ತಮಿಳು ಛಂದಸ್ಸಿನ ಒಂದು ರೀತಿ, ಇದನ್ನು ಒಂದು ಸಂಗತಿ -- ಮಾರನರಿಗೆ ದೈವದ ಬಗ್ಗೆ ಇದ್ದ ಭಕ್ತಿಯ ಸಂಗತಿಯೆಂದೂ ಪರಿಭಾವಿಸಬಹುದು. ದೈವಾನುಭವವನ್ನು ಪಡೆಯಲು ಮಾನವ ದೇಹ ಒಂದು ಅಡ್ಡಿಯೆಂದಿಲ್ಲಿ ಬಣ್ಣಿಸಲಾಗಿದೆ.

ತಿರುವಾಶಿರಿಯಂ ೭೧ ಪದ್ಯಗಳ (೭ ದಶಕಗಳ) ಒಂದು ಗುಚ್ಛ. ಅಶಿರಿಯಂ ಎಂಬುದು ಅಶಿರಿಯಪ್ಪ (ತಮಿಳಿನಲ್ಲಿ ಪ್ರಸಿದ್ಧ) ಛಂದಸ್ಸಿಗೆ ಸಂಬಂಧಿಸಿದ್ದು. ಮಾರನರು ತಾವು ಐಹಿಕ ಬಂಧನದಿಂದ ಮುಕ್ತರಾದ ಮೇಲಿನ ಅನುಭಾವವನ್ನು ವಿವರಿಸುತ್ತ ಈ ಜನ್ಮದಲ್ಲಿಯೇ ಅಂತಹ ಅನುಭವ ತಮಗೆ ದೊರಕಿಸಿಕೊಡಬೇಕೆಂದು ಪ್ರಾರ್ಥಿಸುತ್ತಾರೆ.

ಮೂರನೆಯ ಕೃತಿ ಪೆರಿಯ ತಿರುವಂದಾದಿ. ೮೭ ಪದ್ಯಗಳ ವೆಣ್ಬಾಛಂದಸ್ಸಿನ ಕೃತಿ. ಹೆಸರು ಮಾತ್ರ ಪೆರಿಯ ತಿರುವಂದಾದಿ. ಪ್ರತಿ ಪಾಶುರವೂ ಭಗವಂತನ ಬಗ್ಗೆ ಮಾರನರಿಗಿರುವ ಪ್ರೇಮವನ್ನು ಗೇಯತೆಯೊಂದಿಗೆ ವಿವರಿಸುತ್ತದೆ. ಈ ಭಗವತ್ಪ್ರೇಮದ ಹಾದಿಯಲ್ಲಿನ ಪರೀಕ್ಷೆಗಳು ಕಷ್ಟಗಳನ್ನು ವಿವರಿಸುವ ಈ ಗೀತೆಗಳು ಪ್ರತಿಯೊಂದೂ ಸ್ವತಂತ್ರವಾದ ಭಾವಗೀತೆಗಳಾಗಿವೆ. ಈ ಪ್ರತ್ಯೇಕತೆಯನ್ನು ಉಳಿಸಿಕೊಂಡ ಭಾವಗೀತೆಗಳು ಇಡಿಯಾಗಿ ಒಂದೇ ಗೀತಮಾಲಿಕೆ ಎಂಬುದನ್ನು ಅಂತಾದಿ ಎಂಬ ಶೀರ್ಷಿಕೆಯಿಂದ ಸೂಚಿಸಲಾಗಿದೆ. ಅಂತಾದಿ ಯೆಂದರೆ ಒಂದು ಪಾಶುರದ ಕಡೆಯ ಪದವೇ ಮುಂದಿನ ಪಾಶುರದ ಮೊದಲ ಪದವಾಗುವಿಕೆ. ಪೆರಿಯ ಎಂಬ ಪದ ಮಹತ್ತತೆಯನ್ನೂ, ಉನ್ನತಿಕೆಯನ್ನೂ ಸೂಚಿಸುತ್ತದೆ.

ಮಾರನರ ಮಹಾಕೃತಿ ತಿರುವಾಯ್ಮೊಳಿ. ವಾಯ್ಮೊಳಿ -- ದೈವೀವಾಕ್ಕು ಹಾಗಾಗಿ ಕೃತಿನಾಮ-- ಶ್ರೀದೈವವಾಣಿ. ಇದರಲ್ಲಿ ೧೧೦೨ ಪಾಶುರಗಳಿವೆ. ಹತ್ತು ಭಾಗಗಳಾಗಿರುವ ಪಾಟ್ಟುಗಳು (ಶತಕಗಳು) ಪ್ರತಿಪಾಟ್ಟೂ ಹತ್ತು ಪದ್ಯಗ್ರಳ ಗುಂಪು. ಪ್ರತಿಯೊಂದರಲ್ಲೂ ೧೧ ಪಾಶುರಗಳಿದ್ದು ಅವುಗಳಲ್ಲಿ ಒಂದು ಮಾತ್ರ ೧೩ ಪಾಶುರಗಳನ್ನು ಹೊಂದಿರುತ್ತದೆ. ಬಹುತೇಕ ಎಲ್ಲ ಕೊನೆಯ ಪಾಶುರವೂ, ಆಳ್ವಾರರ ಹೆಸರನ್ನು ಶಠಗೋಪ ಎಂದು ಗುರುತಿಸುವುದು. ಮುಖ್ಯವಾಗಿ ವಿಷ್ಣುವನ್ನು ದೇವತಾಗಣದಲ್ಲಿ ಅತಿಶ್ರೇಷ್ಠನೆಂದು ಘೋಷಿಸಿ, ಉಪನಿಷತ್ತುಗಳಲ್ಲಿ ವಿವರಿಸಿರುವಂತೆಯೇ ಅದನ್ನು ಸ್ಥಾಪಿಸಲಾಗಿದೆ. ದೇವರ ಸರ್ವಕಾರಣಿಕತೆಯನ್ನೂ ಸರ್ವ ವ್ಯಾಪಕತೆಯನ್ನೂ ವಿವರಿಸಲಾಗಿದೆ. ಏಕಕಾಲದಲ್ಲಿ ಅವನು ಅಪೇಕ್ಷಣೀಯನೂ ಅವಾಕ್‌ಗೋಚರನೂ ಆಗಿರುವನು. ಅವನ ಹೊರತು ಬೇರಿಲ್ಲವೆಂದು ಆರಾಧಿಸಲು ಅವಧಾರಿಸಿ ಸೂಚಿಸಲಾಗಿದೆ. ಅವನ ಚರಣಗಳನ್ನು ಆಶ್ರಯಿಸಿ ಸೇವಿಸುವುದರಿಂದಲೇ ಜೀವನದಲ್ಲಿ ಸಾರ್ಥಕತೆ ಪಡೆಯಬಹುದು ಮಾತ್ರವಲ್ಲ ಇದರ ಹೊರತು ಪತನವೇ ಸರಿ. ಭಗವದಾರಾಧನೆಗಿಂತ ಭಾಗವತಾರಾಧನೆ ಸುಲಭತರ. ಈ ರೀತಿಯ ಒಳ್ಳೆಯ ಗುಣಗಳನ್ನು ಬೆಳೆಸಿಕೊಳ್ಳುವುದರಿಂದ ಜೀವನದ ಎಲ್ಲ ಕಷ್ಟಗಳಿಂದಲೂ ದಡ ಸೇರಬಹುದೆಂದು ಮಾರನರು ಸೂಚಿಸುತ್ತಾರೆ.

ಆಳ್ವಾರರು ಆಲಯಗಳಲ್ಲಿನ ಅರ್ಚಾಮೂರ್ತಿಗಳನ್ನು ಆರಾಧಿಸುವಲ್ಲಿ ಅವಧಾರಣೆ ನೀಡಿದ್ದಾರೆ. ತಿರುವಾಯ್ಮೊಳಿಯಲ್ಲಿ ಅರ್ಚಾಮೂರ್ತಿಗಳನ್ನು ವಿವರಿಸುವ ೪೯ ದಶಕಗಳು (ಪ್ರತಿಯೊಂದರಲ್ಲೂ ೧೧ ಪಾಶುರಗಳು) ಇವೆ. ೩೩ ಗುಡಿಗಳು - ಪಾಂಡ್ಯನಾಡಿನ ಉತ್ತರಕ್ಕೆ ಐದು ಆಲಯಗಳೂ - ಮಿಕ್ಕವು ಪಾಂಡ್ಯಕೇರಳ ಪ್ರಾಂತ್ಯಗಳಲ್ಲಿಯೂ ಇವೆ. ನಾಲ್ಕು ಆಲಯಗಳ ಬಗ್ಗೆ ಒಂದೊಂದೇ ಪಾಶುರಗಳಿವೆ. ಜೊತೆಗೇ ಈ ಆಲಯಗಳಲ್ಲಿನ ಮೂರ್ತಿಗಳ ಬಗ್ಗೆಯೂ ಒಂದೊಂದೇ ಪಾಶುರಗಳಿರುವಂತೆ ಹಲವಾರಿವೆ. ಇಲ್ಲಿಯೇ ಉಲ್ಲೇಖಿಸಬಹುದಾದ ಅಂಶ ಎಂದರೆ ತಿರುಮಾಲಿರುಂ ಶೋಲೈನ ಎರಡು ದಶಗಳಿದ್ದರೆ ವೆಂಕಟನಗದ ದೈವಕ್ಕೆ ಮೂರು ದಶಕಗಳು ಮೀಸಲಾಗಿವೆ. ಮಿಕ್ಕವು ಒಂದೊಂದೇ ದಶಕಗಳನ್ನು ಪಡೆದಿವೆ. ತಿರುವೆಂಕಟದ ದೈವ - ಮಾರನರು ಆಶ್ರಯ ಹೊಂದಿದ ದೈವವನ್ನು ಐವತ್ತೆರಡು ಪಾಶುರಗಳಲ್ಲಿ ವಿವರಿಸಲಾಗಿವೆ. ತಿರುಮಾಲಿರುಂ ಶೋಲೆಯ ದೇವರು ಮೂವತ್ತೈದು ಪಾಶುರ ವ್ಯಾವರ್ಣಿತ.

ಭಗವಂತನ ಅರ್ಚಾ, ವ್ಯೂಹ, ವಿಭವ, ಪರರೂಪಗಳ ಅನುಭಾವ ಈ ಪಾಶುರಗಳಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ಆಳ್ವಾರರು ಇಷ್ಟಪಟ್ಟಂತೆ ಅಷ್ಟು ಹೊತ್ತೂ ಅವರಿಗೆ ದೇವರು ಪ್ರತ್ಯಕ್ಷದರ್ಶಿ ಆಗುವುದಿಲ್ಲ. ಹಲವಾರು ಬಾರಿ ಅವರ ಕಣ್ಣ ಮುಂದೆ ಬಂದು ಬೇಗನೆ ಮಾಯವಾಗಿ ಆಳ್ವಾರರನ್ನು ದುಃಖಕ್ಕೀಡು ಮಾಡಿ ಮತ್ತೆ ಸಮಾಧಾನಪಡಿಸಲು ಎದುರು ಬರುತ್ತಾನೆ. ಹೀಗಾಗಿ, ಆಳ್ವಾರರಿಗೆ ಆಗಾಗ ನಿಸ್ಪೃಹೆ, ನಿರಾಸೆ, ನೋವುಂಟಾಗುತ್ತದೆ. ಆದರೂ ದೈವದಲ್ಲಿನ ಅಚಂಚಲ ವಿಶ್ವಾಸ, ಭಕ್ತಿ ಭರವಸೆಗಳು ಮಾರನರಿಗೆ ಚಿತ್ತಸ್ಥೈರ್ಯವನ್ನು ತಂದುಕೊಡುತ್ತವೆ. ಹೀಗಾಗಿ ದೈವಪತಿಯ ಸತಿಯಾಗುತ್ತಾರೆ. ಈ ದಿವ್ಯಸತಿಗೆ ತಾಯಿಯೋ, ಸಖಿಯೋ ಜೊತೆಯಲ್ಲಿದ್ದು ಅವಳ ದುಃಖ ದುಮ್ಮಾನಗಳನ್ನು ದೂರಗೊಳಿಸುವ ಸ್ವಾಂತನದ ಮಾತುಗಳನ್ನಾಡಿ, ದೈವಕೃಪೆಗಾಗಿ ಪ್ರಾರ್ಥಿಸುವರು. ಹೀಗೆ ನಾಯಿಕಾಭಾವವನ್ನು ವಿವರಿಸುತ್ತವೆ. ಇಲ್ಲೆಲ್ಲ ವಿಷ್ಣುವಿನ ಅವತಾರಗಳು ಅವನ ಅರ್ಚಾಮೂರ್ತಿಗಳೂ ವರ್ಣಿತವಾಗಿವೆ. ಅವನ ಅವತಾರಗಳಲ್ಲಿನ ವಿವಿಧ ಸಾಧನೆಗಳು, ಅರ್ಚಾವತಾರದ ವಿಚಿತ್ರ ಸೊಬಗು ಆಳ್ವಾರರನ್ನು ಅನಂತ ತುಂದಿಲರನ್ನಾಗಿಸುತ್ತವೆ.

ಮಧುರಕವಿಗಳು ಶಠಗೋಪರ ಸೇವೆಯಲ್ಲಿದ್ದಾಗ ಒಮ್ಮೆ ದೇವರು ಮಾರನರ ಮುಂದೆ ಸರ್ವಾಲಂಕಾರ ಭೂಷಿತನಾಗಿ ಗರುಡವಾಹನವನ್ನೇರಿ ಕಂಡುಬಂದರು. ಮಾರನರು ತಮ್ಮ ಕಣ್ಣ ಮುಂದಿನ ಈ ದೃಷ್ಯವನ್ನು ತೃಪ್ತರಾಗಿ ಕಂಡು ತಮ್ಮ ಅನುಭವವನ್ನೇ ತಿರುವಿರತ್ತಂ, ತಿರುವಾಶಿರಿಯಂ, ಪೆರಿಯ ತಿರುವಂದಾದಿ, ತಿರುವಾಯ್ಮೊಳಿಗಳಾಗಿ ಹಾಡಿದರು. ಆಗ ವೈಕುಂಠದ ನಿತ್ಯಸೂರಿಗಳು, ಶ್ವೇತದ್ವೀಪವಾಸಿಗಳು, ಅರ್ಚಾಮೂರ್ತಿಗಳ ಆರಾಧನೆಯಲ್ಲಿ ತೊಡಗಿದ ಪಾರ್ಷದರು ಮಾರನರ ಬಳಿ ಬಂದು ಮಾರನರ ಕೀರ್ತಿಯನ್ನು ಉಗ್ಗಡಿಸಿದರು. ಮಾರನರು ಬಂಧಮುಕ್ತರಾದವೆಂದು ಈ ಸಂತಸವನ್ನು ಹಂಚಿಕೊಳ್ಳಲು ಎಲ್ಲ ಭಕ್ತರನ್ನೂ ಕರೆಯುವರು.

ಗುರುಪರಂಪರೆಯಲ್ಲಿ ಮಾರನ್ನರ ದೈವಸಾಕ್ಷಾತ್ಕಾರದ ಬಗ್ಗೆ ಈ ವಿವರ ಕಂಡುಬರುತ್ತದೆ. ಇದನ್ನು ಎಚ್ಚರಿಕೆಯಿಂದ ವಿಶ್ಲೇಷಿಸಿದಲ್ಲಿ ಹಲವಾರು ಸಂಶಯಗಳು ದೂರಾಗುವುವು.

ಭೂಮಿಯ ಮೇಲಿನ ತಮ್ಮ ಜೀವನದ ಕೊನೆಯ ದಿನದವರೆಗೆ ಮಾರನ್ನರು ಹುಣಿಸೆಯ ಮರದ ಕೆಳಗೇ ಕುಳಿತಿದ್ದರು ಎನ್ನಲಾಗಿದೆ. ಅವರು ಅಲ್ಲಿಂದ ಕದಲಲೇ ಇಲ್ಲ ಹಾಗೂ ಹದಿನಾರನೆಯ ವರ್ಷದವರೆಗೆ ಮಾತೂ ಆಡಲಿಲ್ಲ. ಅವರ ಪಾಶುರಗಳು ಭೂಮಿಯ ಮೇಲಿನ ಮೂವತ್ತಮೂರು ಆಲಯಗಳ ಬಗ್ಗೆಯೂ, ಸಾಧಾರಣರಿಗೆ ಅಗಮ್ಯವಾದ

!ರಸಾಗರ, ಪರಮಪದಗಳನ್ನೂ ವಿವರಿಸುವುವು. ಲ್ಲಿನ ಆಲಯಗಳಲ್ಲಿ ಐದು ಚೋಳನಾಡಿನಲ್ಲೂ, ಾಂಡ್ಯನಾಡಿನಲ್ಲಿ ಹನ್ನೆರಡೂ, ಪರ್ವತ ಪ್ರಾಂತ್ಯದಲ್ಲಿ ೇರಳವೂ ಸೇರಿದಂತೆ) ಹನ್ನೆರಡೂ, ತೊಂಡ ಂಡಲದಲ್ಲಿ ಒಂದೂ, ಉತ್ತರದಲ್ಲಿ ನಾಲ್ಕೂ ವೆ. ಅರ್ಚಾಮೂರ್ತಿಗಳನ್ನು ವಿವರಿಸುವ ಪಾಶುರ ಳು ನಾಲ್ಕು ನೂರಾಮೂರು ಆಗಿದ್ದು ಭೂಮಿಯ ೀಲಣ ಆಲಯಗಳದ್ದೇ ಮುನ್ನೂರ ಐವತ್ತೊಂತ್ತು ಆಗುತ್ತವೆ.

ಹುಣಿಸೆಯ ಮರದ ಕೆಳಗಿನಿಂದ ಹೊರಬರದೆ, ಮ್ಮ ಹದಿನಾರನೆಯ ವಯಸ್ಸಿನವರೆಗೆ ಯಾರೊಂ ಗೂ ಮಾತನಾಡದ ಮಾರನರು, ದೇರೆ ದೇರೆ ಸ್ಥಳ ಳಲ್ಲಿನ ಆಲಯಗಳ ಬಗ್ಗೆ ತಿಳಿದದ್ದಾರೂ ಹೇಗೆ? ಮ್ಮ ಸ್ಥಳದ ಬಳಿಯಲ್ಲಿಯೇ ಇದ್ದ ಇಪ್ಪತ್ತನಾಲ್ಕು ಲಯಗಳ ದೇವರ ಕೀರ್ತನೆಯನ್ನೇಕೆ ಮಾಡಿ ರು! ಐವತ್ತೆರಡು ಪಾಶುರಗಳಲ್ಲಿ ವರ್ಣಿಸುವಷ್ಟರ ುಟ್ಟಿಗೆ ತಿರುವೆಂಕಟ ದೇವರಲ್ಲಿ ಏಕೆ ಸೆಳೆಯಲ್ಪ ್ಟರು? ಜೊತೆಗೇ ಐದು ಸ್ಥಳಗಳ ದೇವಾಲಯ ಳು ದೇರೆ ದೇರೆ ಕಡೆ ಪುನಃ ಪುನಃ ಕೀರ್ತಿಸಲ್ಪಟ್ಟಿ ವೆಯಲ್ಲ? (ವಿಶೇಷವಾಗಿ ತಿರುವೆಂಗಡಂ ಆಲಯ ಳು ಪತ್ತುಗಳಲ್ಲಿ). ಉದಾಹರಣೆಗೆ ತಿರುಮಾ ರಿರುಂ ಶೋಲೆಯ ದೇವರನ್ನು ಎರಡು ಭಾಗಗಳು, ಎರಡು ಪಾಶುರಗಳಲ್ಲಿ ಹಾಡಿದನಂತರ ಇಪ್ಪತ್ತೇಳು ಸ್ಥಳಗಳ ಅರ್ಚಾಮೂರ್ತಿಗಳ ವೈಭವವನ್ನು ಸ್ತುತಿಸಿ ಮತ್ತೆ ತಿರುಮಾಲಿರುಂ ಶೋಲೈ ದೇವರ ಕೀರ್ತನೆ ಯಲ್ಲಿ ತೊಡಗುತ್ತಾರೆ. ಇದನ್ನು ಹೇಗೆ ಸಮನ್ವಯಿ ಸುವುದು ?

ತಾರ್ಕಿಕವಾಗಿ ಹೇಳುವುದಾದರೆ ಮಾರನರ ಜೀವನದಲ್ಲಿ ಅನುಭಾವ ಒಂದು ಉನ್ನತ ಪಾತ್ರ ವಹಿಸಿತೆನ್ನಬೇಕು. ಸ್ವಪ್ರಯತ್ನವಿಲ್ಲದೆಯೇ ಮಾರ ನರ ಮುಂದೆ ಅನೇಕ ಸ್ಥಳಗಳ ಅರ್ಚಾಮೂರ್ತಿ ಗಳು ಕಾಣಿಸಿಕೊಂಡವು. ತಾವು ನಿರಂತರವಾಗಿ ಭಗ ವಂತನನ್ನು ಕಾಣಲಾರದೆ ನಿರಾಸೆಯಿಂದ ತುಂಬಿದ ಮಾರನರ ಮುಂದೆ ಒಂದು ಸ್ಥಳದ ಅರ್ಚಾಮೂರ್ತಿ ಕಾಣಿಸಿಕೊಂಡ ಕೂಡಲೇ, ಆತ ಆ ದೇವರನ್ನು ಕೀರ್ತಿಸಿ, ಆ ದೇವರು ತನ್ನ ಮುಂದೆ ನಿರಂತರ ವಾಗಿ ಎಲ್ಲ ಕಾಲದಲ್ಲೂ ಕಾಣಿಸಿಕೊಳ್ಳುವ ಕರುಣೆ ದೋರಬೇಕೆಂದು ಬೇಡುತ್ತಾರೆ. ಆದರೆ ದೇವರು ಮಾರನರನ್ನು ಮತ್ತೆ ದುಮ್ಮಾನದಲ್ಲಿ ಬೀಳುವಂತೆ ಮಾಡಿ ಮಾಯವಾಗುವರು. ಹಲವು ಸಲ ಒಂದೇ ಅರ್ಚೆಯ ರೂಪದಲ್ಲಿ ಪುನಃ ಪುನಃ ದೈವದರ್ಶನ ವಾದಾಗ ಮಾರನರು ತಮ್ಮ ಅನುಭಾವವನ್ನು ವಿವ ರಿಸಿದರು. ಹೀಗಾಗಿ ಮಾರನರು ತಮ್ಮ ಸ್ಥಳದ ಸನಿ ಹದಲ್ಲಿದ್ದ ಅರ್ಚಾಮೂರ್ತಿಗಳನ್ನೇ ಕೀರ್ತಿಸಿ ದೂರ ದೂರದ ಅರ್ಚಾಮೂರ್ತಿಗಳನ್ನು ಬಿಟ್ಟರೇಕೆ ಎಂಬ ಪ್ರಶ್ನೆ ಉಂಟಾಗಲು ಸಾಧ್ಯವಿಲ್ಲ. ಈ ಕಾರಣದಿಂ ದಲೇ ಮಾರನರು ಯಾವುದೇ ಒಂದು ವಿಶಿಷ್ಟ ವಾದ ಮೂರ್ತಿಯನ್ನೂ ಅಪೇಕ್ಷಿಸಲಿಲ್ಲ ಎಂದೂ ಹೇಳಬೇಕು. ಆತ ವೆಂಕಟದ ದೈವವನ್ನು ಪದೇ ಪದೇ ಕಾಣುವಂತೆ ಆಕರ್ಷಿತವಾದದ್ದೇಕೆ ಎಂಬು ದಕ್ಕೆ ದೈವ ಆ ರೂಪದಲ್ಲಿ ಮಾರನರ ಮುಂದೆ ಪದೇ ಪದೇ ಕಾಣಿಸಿಕೊಂಡ ಎಂಬುದಷ್ಟೇ ಉತ್ತರವಾಗು ತ್ತದೆ.

ವಿಷ್ಣುಸಾಕ್ಷಾತ್ಕಾರವಾದ ಕೂಡಲೇ ಮಾರನರು ಪಾಶುರಗಳನ್ನು ಹೇಳಲಿಲ್ಲವೆಂದು ಹೇಳಬಹುದು. ಕಾರಣ ಆಯಾ ಅರ್ಚಾಮೂರ್ತಿಗಳು ಅವರಿಗೆ ಕಾಣಿಸುವ ಮೊದಲೇ ಅವುಗಳ ಕೀರ್ತನೆಯ ಪಾಶು ರಗಳ ಸೃಜನೆ ಆಗಿರಲಾರದು. ಆಯಾ ಅರ್ಚಾ ಮೂರ್ತಿಗಳು ದರ್ಶನ ನೀಡಿದಾಗ ಅವುಗಳನ್ನು ಕೀರ್ತಿಸಿ ಹಾಡಿದುದನ್ನು ಅವರ ಶಿಷ್ಯ ಮಧುರ ಕವಿ ಬರೆದುಕೊಂಡಿರಬೇಕು. ಮಾರನರು ಪಾಶು ರಗಳನ್ನು ಹಾಡಿದಾಗಲೆಲ್ಲ -- ಉದ್ದಕ್ಕೂ -- ಅನು ಭಾವ ಅಥವಾ ಪ್ರತಿಮಾ ವಿಧಾನದ ಕ್ರಿಯೆ ಇದ್ದಿತು ಎಂದೂ ಹೇಳುವಂತೆ ಇಲ್ಲ. ನಿರಾಸೆ, ನಿಸ್ಪೃಹೆಗಳ ಕಾಲದಲ್ಲಿ, ತನ್ನ ನೋವನ್ನು ಇತರರೊಡನೆ ವಿವರಿ ಸುವ ಕಾಲದಲ್ಲಿ ಅನುಭಾವದ ನಿರಂತರತೆಗೆ ತಡೆ ಯುಂಟಾಗಿರಬೇಕು.

ಮಾರನರು ಮೂವತ್ತೆರಡು ವರ್ಷ -- ಹಲವು ಪುರಾಣಗಳಂತೆ ಮೂವತ್ತೈದು ವರ್ಷ -- ಜೀವಿಸಿ ದ್ದಿರಬೇಕು. ಮೂಲನಾಮ ಯಾವುದು ಎಂಬುದೇ ತಿಳಿದು ಬಾರದ ಮಧುರಕವಿಗಳು — ತಮ್ಮ ಗುರು ವನ್ನೇ ದೇವರೆಂದು ಭಾವಿಸಿದವರು - ಐವತ್ತೈದು ವರ್ಷ ಜೀವಿಸಿದ್ದರು.

ಮಾರನ್, ಶಠಗೋಪ ಎಂಬ ಹೆಸರುಗಳೊ ಡನೆ ಶ್ರೀರಂಗದ ದೇವರು ಅವರಿಗೆ ನಮ್ಮಾ ಳ್ವಾರ್ (ನಮ್ಮ ಆಳ್ವಾರರು) ಎಂಬ ಹೆಸರು ನೀಡಿ ದರು. ಅವರು ಕುರುಗೈ ದೇವರು ಧರಿಸಿದ ವಕುಳ ಮಾಲೆಯನ್ನು ಧರಿಸಿದ್ದರಿಂದ ವಕುಳಾಭರ ಣರೆಂಬ ಹೆಸರು ಬಂದಿತು. ಅವರ ಪಾಶುರಗಳಲ್ಲಿ ವಿಷ್ಣುಪಾರಮ್ಯವನ್ನು ಖಚಿತವಾಗಿ ನಿರೂಪಿಸಿ ವೈಷ್ಣ ವವಿರೋಧಿಗಳನ್ನು ನಿರೋಧಿಸಿದ್ದರಿಂದ ಪರಾಂ ಕುಶ (ವಿರೋಧಿ ಗಜಗಳಿಗೆ ಅಂಕುಶ) ಎಂಬ ಹೆಸರು. ತಮಿಳು ದಿವ್ಯ ಪ್ರಬಂಧಗಳನ್ನು ವೇದ ಸಮಾನವೆಂದು ಪುನಃ ಪ್ರಕಾಶ ಪಡಿಸಿದ ನಾಥ ಮುನಿಗಳ ಮೊಮ್ಮಗ ಯಾಮುನಾಚಾರ್ಯರು ತಿಳಿ ದಂತೆ ಮಾರನರು 'ಕುಲಪತಿ'. ಈ ಹೆಸರುಗ ಳಲ್ಲಿ ಶಠಗೋಪ ಹಾಗೂ ನಮ್ಮಾಳ್ವಾರ್ ಎಂಬ ಹೆಸರುಗಳು ಬಹುಪ್ರಸಿದ್ಧವಾಗಿವೆ. ಆಳ್ವಾರ್‌ಗ ಳಲ್ಲಿ ಶಠಗೋಪರು ಪ್ರಧಾನರು. ಶ್ರೀ ವೈಷ್ಣವ ರಲ್ಲಿ ಕಂಡುಬರುವ ಮೂರು ಮುಖ್ಯ ಅಂಶಗಳು ಈ ಮಾತಿಗೆ ಸಾಕ್ಷಿ. ಮೊದಲನೆಯದು ಆಳ್ವಾರ್ ಗಳೇ ಅಂಗಾಂಗಳಾಗಿರುವ ದೇಹದ ಶಿರ ಶಠಗೋ ಪರು. ಎಂದರೆ - ವಿಷ್ಣುವೇ ಅಂತರಾತ್ಮನಾದ ಈ ದೇಹದ ಮುಖ್ಯಾಂಗ ತಲೆ. ಇದು ಶಠಗೋಪ ರಿಂದ ಪ್ರತಿನಿಧಿತವಾಗಿದೆ. ಎರಡನೆಯ ಅಂಶವೆಂ ದರೆ ದೈವಪಾದಗಳನ್ನು ಶಠಗೋಪರು ಪಡೆದದ್ದು (ಪ್ರತಿನಿಧಿಸಿದ್ದು). ಶ್ರೀ ವೈಷ್ಣವ ಅರ್ಚಾಮೂರ್ತಿ ಗಳ ಬಳಿ ಆರಾಧಿಸಿದ ಪ್ರತಿಯೊಬ್ಬರಿಗೂ, ಪುರೋ ಹಿತರು ಶಟಾರಿಯನ್ನು ಅವರ ತಲೆಯ ಮೇಲಿಡು ವುದರಿಂದ ಅತಿಶ್ರೇಷ್ಠ ಆಶೀರ್ವಾದ ಗೌರವ ಲಭಿಸು ತ್ತದೆ. ಅವರು ಮಾನವರಾಗಿ ಜನ್ಮವೆತ್ತಿದರೂ ನಾಥ ಮುನಿ, ವಿಶ್ವಕ್ಸೇನರ ನಡುವಣ ಸ್ಥಾನವನ್ನು ಪಡೆದಿ ದ್ದಾರೆ. ಎಲ್ಲ ಮಾನವರೂ ಇವರ ಮೂಲಕವೇ ಭಗವಂತನನ್ನು ಸೇರುವರು.

ನಮ್ಮಾಳ್ವಾರರ ಕಾಲದ ಬಗ್ಗೆ ಸಮಸ್ಯೆಗಳಿವೆ. ಪರಂಪರೆಯಂತೆ ಕಲಿಯುಗದ ಆರಂಭವಾದ ಮೇಲೆ ನಲವತ್ತೂರನೆಯ ದಿನ ಅವರು ಜನ್ಮ ತಳೆ ದರು. ಈ ಕಾಲ ನಿರ್ಣಯಿಸುವುದು ತುಸು ಕಷ್ಟ. ತಿರುನಲ್ವೇಲಿ ನಗರದ ಬಳಿಯ ದಕ್ಷಿಣದ ನಂಗುನೇ ರಿಯಲ್ಲಿನ ಅರ್ಚಾಮೂರ್ತಿಯನ್ನು ಅವರು ಕೀರ್ತಿಸಿ ದ್ದಾರೆ. ಶಠಗೋಪರು ಈ ಸ್ಥಳವನ್ನು ಸಿರಿವರಮರಿ ಕಲಂ ಎಂದು ತಿಳಿಸಿದ್ದಾರೆ. ವರಗುಣಮಂಗೈ ದೇವಾ ಲಯವನ್ನೂ ಕುರಿತು ಹಾಡಿದ್ದಾರೆ. ಇವೆರಡೂ ಆಲ ಯಗಳೂ ಪಾಂಡ್ಯರಾಜ ಜಟಿಲ ಪರಾಂತಕ ವರ ಗುಣ ೧ ನ ಕಾಲದಲ್ಲಿ (೭೬೮ ಕ್ರಿ.ಶ. - ೮೧೫) ಈ ಹೆಸರುಗಳನ್ನು ಪಡೆದವು. ಇಲ್ಲಿನ ಅರ್ಚಾಮೂರ್ತಿ ಗಳು ಮಾತ್ರವೇ ವರಗುಣವೆಂಬ ಪೂರ್ವೋದಂತ ವನ್ನು ಪಡೆದಿವೆ; ಪಾಂಡ್ಯರಾಜ್ಯದಲ್ಲಿ ಇನ್ನೂ ಹದಿ ನೆಂಟು ಗುಡಿಗಳಿದ್ದರೂ ಸಹ. ಈ ಆಲಯ ಗಳು ವರಗುಣನ ಆಡಳಿತಕ್ಕೂ ಮೊದಲೇ ಇದ್ದಿರ ಬಹುದು. ದೊಡ್ಡ ಆಲಯನಿರ್ಮಾಣ ಅಥವಾ ಜೀರ್ಣೋದ್ಧಾರದ ಕೆಲಸದಿಂದ ರಾಜನ ಹೆಸರು ಆಲಯಗಳಿಗೂ ಬಂದಿರಬೇಕು. ಶಠಗೋಪರು ಕ್ರಿ.ಶ. ೭೯೮ ವರ್ಷಕ್ಕೆ ಸಮನಾದ ಬಹುಧಾನ್ಯ ವರ್ಷ ದಲ್ಲಿ ಹುಟ್ಟಿ ಕ್ರಿ.ಶ. ೮೩೦ ವರೆಗೆ ಇದ್ದಿರಬಹುದು ಎನ್ನಲಿಕ್ಕುಂಟು.

ಅನುವಾದ -- ಬಿ. ಎನ್. ಎಸ್.

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದು ಉಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಫಲಕ ಇಡಲಾಗುವುದೆ ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/–

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿ ಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು,

ತಿರುಪತಿ -- 517 507.

# ಯಜ್ಞದ ಮಹತ್ವ

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನ ಸಂಭವಃ
ಯಜ್ಞಾದ್ಭವಂತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ

ಜೀವಿಗಳು ಆಹಾರದಿದಲೂ, ಆಹಾರ ಮಳೆಯಿಂದಲೂ, ಮಳೆ ಯಜ್ಞದಿಂದಲೂ ಯಜ್ಞ ಸತ್ಕರ್ಮಗಳಿಂದಲೂ ಉಂಟಾಗುತ್ತದೆ.

ಯಜ್ಞ ಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷ್ಯೈಃ
ಭುಂಜತೇ ತೇ ತ್ವಘಂ ಪಾಪಾಯೇ ಪಚಂತ್ಯಾತ್ಮಕಾರಣಾತ್

ಯಜ್ಞದ ನಂತರ ಉಳಿದದ್ದನ್ನು ಭುಜಿಸುವವನು ಸರ್ವಕಲ್ಮಷಗಳಿಂದ ಮುಕ್ತನಾಗುತ್ತಾನೆ. ತನ್ನ ಹೊಟ್ಟೆಗಾಗಿಯೇ ಎಲ್ಲವನ್ನೂ ಬಳಸುವವ ಪಾಪವನ್ನೇ ತಿಂದುಕೊಳ್ಳುತ್ತಾನೆ.

ಯಜ್ಞೇನ ಯಜ್ಞಮಯಜಂತ ದೇವಾಃ
ತಾನಿ ಧರ್ಮಾಣಿ ಪ್ರಥಮಾನ್ಯಾಸನ್
ತೇಹ ನಾಕಂ ಮಹಿಮಾನಸ್ಸಚರಿತ
ಯತ್ರ ಪೂರ್ವೇಸಾಧ್ಯಾಸ್ಸಂತಿ ದೇವಾಃ

ಇಂದ್ರಾದಿ ದೇವತೆಗಳೆಲ್ಲ ಸೇರಿ ಲೋಕಕಲ್ಯಾಣಕ್ಕಾಗಿ -- ಒಂದು ಯಜ್ಞವನ್ನು ಮಾಡಿದರು. 'ಯಜ್ಞವೇ ಪ್ರಥಮಧರ್ಮವೆಂದು ಕರೆಯಲ್ಪಟ್ಟು, ಅಂದಿನಿಂದ ಇಂದಿನವರೆಗೆ ಅನೂಚಾನವಾಗಿ ಆರ್ಷೇಯರಾದ ಋಷಿ ಮುನಿಗಳಿಂದ ರಾಜರ್ಷಿಗಳವರೆಗೆ ವೈದಿಕ ಪ್ರಕ್ರಿಯೆಯಲ್ಲಿ 'ಯಜ್ಞವು' ನಡೆಯುತ್ತಾ ಬರುತ್ತಿದೆ. 'ಯಜ್ಞ' ಪದವು ಎರಡು ಅರ್ಥಗಳಿಂದ ಸಾಮಾಜಿಕ ಬದುಕಿಗೆ, ಸ್ಪಂದಿಸುತ್ತಿದೆ. ಒಂದು ಅರ್ಥದಲ್ಲಿ 'ಯಜ್ಞ' ಎಂದರೆ -- ಅಗ್ನಿಮುಖವಾಗಿ ಮಾಡುವ ವೈದಿಕ ಪ್ರಕ್ರಿಯೆ. ಮತ್ತೊಂದು ಅರ್ಥದಲ್ಲಿ -- 'ಸೇವೆ' ಎಂದೂ ಅರ್ಥ ವಿಸ್ತರಣೆಯಿಂದ 'ಯಜ್ಞ'ವು ಲೋಕೋಪಕಾರಕವಾಗಿದೆ.

ಲೋಕಗುರುವಾದ ವಾಸುದೇವ ಶ್ರೀಕೃಷ್ಣನು ಹೇಳುತ್ತಾನೆ. ಅದು ನಮಗೂ ಮತ್ತು ದೇವತೆಗಳಿಗೂ ಇರುವ, ಇರದೇಕಾದ ಸಂಬಂಧದ ಕುರಿತು ಶ್ರುತಪಡಿಸುತ್ತದೆ.

ಸಹಯಜ್ಞಾಃ ಪ್ರಜಾಸೃಷ್ಟ್ವಾ
ಪುರೋವಾಚಃ ಪ್ರಜಾಪತಿಃ
ಅನೇನ ಪ್ರಸವಿಷ್ಯಧ್ವಂ
ಯೇಷವೋಽಸ್ತ್ವಿಷ್ಟಕಾಮಧುಕ್ (ಗೀತಾ)

ಸೃಷ್ಟಿಕರ್ತನಾದ ಬ್ರಹ್ಮದೇವನು 'ಯಜ್ಞ' ಸಹಿತವಾಗಿ ಪ್ರಜೆಗಳನ್ನು ಸೃಷ್ಟಿಸಿ ಪ್ರಜೆಗಳನ್ನು ಕುರಿತು -- ನೀವು ನಿಮ್ಮ ಎಂದರೆ ಲೋಕದ ಕ್ಷೇಮಕ್ಕಾಗಿಯೇ ನನ್ನಿಂದ ನಿಯೋಜಿಸಲ್ಪಟ್ಟ ಇಂದ್ರನೇ ಮೊದಲಾದ ಸಕಲ ದೇವತೆಗಳನ್ನು ತೃಪ್ತಿಪಡಿಸಿದರೆ ಅವರು ಯಾವತ್ತೂ, ನಿಮ್ಮ ಇಹದ ಬದುಕಿಗೆ ಅಗತ್ಯವಾದ ಎಲ್ಲ ಸಂಪತ್ತನ್ನೂ ಪ್ರಕೃತಿಯ ಮಡಿಲಲ್ಲಿಟ್ಟು ನಿಮ್ಮನ್ನು ಕಾಯುತ್ತಾರೆ.

ದೇವತೆಗಳು ಎಂದಿಗೂ ಪ್ರತ್ಯಕ್ಷಪ್ರಿಯರಲ್ಲ. "ಪರೋಕ್ಷ ಪ್ರಿಯರು". -- ಎಂದರೆ, ಸದಾ ತೆರೆಯ ಮರೆಯಲ್ಲಿದ್ದೇ ಲೋಕಕ್ಷೇಮವನ್ನು ಕೋರುವವರು. ನಿಮ್ಮ ಮತ್ತು ಅವರ ಸಂಬಂಧವು ಚಿರಂತನವಾಗಿರಬೇಕು. ಆದ್ದರಿಂದಲೇ ನಿಮ್ಮಿಬ್ಬರ ನಡುವಿನ ಸ್ನೇಹಕ್ಕೆ ದೇವಗಣಗಳಲ್ಲಿ ಓರ್ವನಾದ ಅಗ್ನಿಯನ್ನು ನಿಮಿತ್ತಮಾಡಿ ನಿಯೋಜಿಸಿರುತ್ತೇನೆ. 'ಅಗ್ನಿ'ಯು ಪ್ರಥಮದೇವತೆ. ("ಅಗ್ನಿರಗ್ರೇ ಪ್ರಥಮೋ ದೇವತಾನಾಂ") ಆತನನ್ನು, ಆ ಮಹಾತ್ಮನನ್ನು ನೀವು ಪ್ರತಿಷ್ಠಾಪಿಸಿ, ಅವನ ಮೂಲಕವಾಗಿ ದೇವತೆಗಳಿಗೆ ಸಲ್ಲಬೇಕಾದ 'ಹವಿ'ಸ್ಸನ್ನು ಕಾಲ -- ಕಾಲಕ್ಕೆ ತಪ್ಪದೇ ಸಲ್ಲಿಸಿದರೆ ನಿಮ್ಮ ಎಲ್ಲ ಕಾಮನೆಗಳನ್ನೂ ಅವರು ನೆರವೇರಿಸಿ ಕೊಡುತ್ತಾರೆ.

"ಪರಸ್ಪರಂ ಭಾವಯಂತಃ
ಶ್ರೇಯಃ ಪರಮವಾಪ್ಸ್ಯಥಾ"

ನಿಮ್ಮಿರ್ವರ ಪರಸ್ಪರಸಂಬಂಧವು ಉಭಯತ್ರ ಶ್ರೇಯಸ್ಸಿಗೆ ಹೇತುವಾಗಲಿ ಎಂದು ಆಶಿಸಿ ಆದೇಶಿಸಿದ. "ಯಜ್ಞೋ ವೈ ವಿಷ್ಣುಃ" ಎನ್ನುತ್ತಾರೆ. ಯಜ್ಞರೂಪದಲ್ಲಿ ಸರ್ವಾಂತರ್ಯಾಮಿಯಾದ ಶ್ರೀವಿಷ್ಣುವು ಸನ್ನಿಹಿತರಾಗಿರುತ್ತಾನೆ. ಯಜ್ಞನಾರಾಯಣನೆಂದೇ ಕರೆಸಿಕೊಳ್ಳುವ ಪರಮಾತ್ಮನನ್ನು ಅಗ್ನಿಮುಖವಾಗಿ ಪ್ರಾರ್ಥಿಸಿ, ಆವಾಹನೆ ಮಾಡಿ ಒಲಿಸಿಕೊಳ್ಳುವಾಗ ಪ್ರತಿ ಹವಿಸ್ಸನ್ನೂ ಅರ್ಪಿಸುವಾಗ 'ಇದಂ ನ ಮಮ' -- ಇದು ನನ್ನದಲ್ಲ ಎಂದು "ಭಾವಶುದ್ಧಿ" ಮತ್ತು "ಭಕ್ತಿ"ಯಿಂದ ಅರ್ಪಿಸಿದಲ್ಲಿ ಅಂತಹ ಉತ್ತಮತ್ಯಾಗವು ನಮ್ಮ ನಿರೀಕ್ಷೆಗಿಂತ ಅಧಿಕ ಫಲ(ಕೊಡುತ್ತದೆ) ಪ್ರಾಪ್ತಿಗೆ ಕಾರಣವಾಗುತ್ತದೆ. ಆದ್ದರಿಂದ ನಾವು 'ಯಜ್ಞ'ವನ್ನು ರಕ್ಷಣೆ ಮಾಡುವುದು ನಮ್ಮ ಆದ್ಯ ಕರ್ತವ್ಯಗಳಲ್ಲಿ ಬಹುಮುಖ್ಯವಾದುದು.

"ಯಜ್ಞೋ ರಕ್ಷತಿ ರಕ್ಷಿತಃ"

ಯಜ್ಞವನ್ನು ನಾವು ರಕ್ಷಿಸಿದರೆ -- ನಮ್ಮನ್ನು ಯಜ್ಞವು ರಕ್ಷಿಸುತ್ತದೆ. 'ಯಜ್ಞ'ದಿಂದ ನಾನಾ ಬಗೆಯ ಪ್ರಯೋಜನಗಳಿವೆ. ಯಜ್ಞವು -- ಚರಾಚರ ಜಗತ್ತಿನ ಅಧ್ಯಕ್ಷನಾದ ಪರಮಾತ್ಮನ ಕೃಪೆಗೆ ಪಾತ್ರರಾಗುವುದು ಒಂದು ಪ್ರಯೋಜನವಾದರೆ -- ಪರೋಕ್ಷಪ್ರಿಯರಾದ ದೇವತೆಗಳನ್ನು ಸಂಪ್ರೀತಿಗೊಳಿಸಿ, ಅವರ ಅನುಗ್ರಹಕ್ಕೆ ಪಾತ್ರರಾಗಿ ಇಹದ ಸೌಖ್ಯವನ್ನು ಪಡೆದು ಸುಖವಾಗಿ ಜೀವಿಸಬಹುದು.

ಯಜ್ಞದಿಂದ ಮಳೆ -- ಬೆಳೆ ಇತ್ಯಾದಿ ಸಕಲ ಸಂಪತ್ತನ್ನೂ ಪಡೆಯಬಹುದು. ಯಜ್ಞಧೂಮವು ಆಕಾಶದಲ್ಲಿ ಮೂಡುವ ಮೋಡಗಳಲ್ಲಿ ಸೇರಿ ಮಳೆಯ ರೂಪದಲ್ಲಿ ಭೂಮಿಯನ್ನು ತಂಪುಮಾಡಿ ಉತ್ತಮ ಬೆಳೆ ತೆಗೆಯಲು ಉಪಕಾರಕವಾಗುತ್ತದೆ. ಮಾತ್ರವಲ್ಲದೇ -- ಯಜ್ಞಧೂಮವು ಎಲ್ಲ ಕಡೆ ವ್ಯಾಪಿಸಿ, ಪ್ರಕೃತಿಯ ಮಡಿಲನ್ನು, ಪರಿಸರವನ್ನು ಶುದ್ಧಿಗೊಳಿಸುತ್ತದೆ. ಮಾಲಿನ್ಯವನ್ನು ದೂರಮಾಡುತ್ತದೆ.

ವೇದೋಕ್ತಕರ್ಮವಾದ ಈ ಯಜ್ಞವು ಅತ್ಯಂತ ಪ್ರಯೋಜನಕಾರಿ ಎಂಬ ಅಂಶವನ್ನು ಈ ಶತಮಾನದ ಆಧುನಿಕ ವಿಜ್ಞಾನಿಗಳೂ ಸಹ ತಮ್ಮ ನಿರಂತರ ಸಂಶೋಧನೆಯ ಮೂಲಕ "ಯಜ್ಞದ ವೈಶಿಷ್ಟ್ಯವನ್ನೂ, -- ಯಜ್ಞದ ಆವಶ್ಯಕತೆ" ಯನ್ನೂ ಮನಗಂಡು ವಾಸ್ತವಾಂಶವನ್ನು ಹೊರಗೆಡವುತ್ತಾ ಬಂದಿದ್ದಾರೆ.

ಲಕ್ಷಾಂತರ ವರುಷಗಳ ಹಿಂದೆಯೇ ದಾಶರಥಿ ರಾಮನು -- ವಿಶ್ವಾಮಿತ್ರರು ಲೋಕಕಲ್ಯಾಣಾರ್ಥವಾಗಿ, ಬಲಿಯತ್ಯಾಗಕ್ಕೆ ಹೆಸರಾದ ಸಿದ್ಧಾಶ್ರಮದಲ್ಲಿ ಕೈಗೊಂಡಿದ್ದ ಯಜ್ಞಕ್ಕೆ ವಿಘ್ನಕಾರಿಗಳಾಗಿ ಬಂದ ರಾಕ್ಷಸತ್ರಯರನ್ನು ನಿಗ್ರಹಿಸಿ ಯಜ್ಞರಕ್ಷಣೆ ಮಾಡಿದ ಪ್ರಸಂಗವು ಇತಿಹಾಸ ಪ್ರಸಿದ್ಧವಾಗಿದೆ.

"ಯಜ್ಞ"ವು ಮತ್ತೊಂದು ವಿಶಾಲ ಅರ್ಥದಲ್ಲಿ ನಮ್ಮ ಬದುಕಿನಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ. "ಸೇವೆ" ಎಂಬರ್ಥದಲ್ಲಿಯೂ -- ಯಜ್ಞವು ಮಹತ್ತರ ಪಾತ್ರ ವಹಿಸುತ್ತಾ ಬಂದಿದೆ. ಹೆತ್ತತಾಯ್ತಂದೆಯರ, ಗುರು ಹಿರಿಯರ, ಅಶಕ್ತರ, ರೋಗ--ರುಜಿನಗಳಿಗೆ ತುತ್ತಾದವರ, ಬಡತನದ ಬೇಗೆಯಲ್ಲಿ ಬೇಯುವ ಸೋದರ ಮಾನವರ ಶುಶ್ರೂಷೆಯೂ ಒಂದು ಉತ್ತಮ (ಸೇವೆಯೇ) "ಯಜ್ಞ"ವೇ ಆಗುತ್ತದೆ. *

---ಸಂತ ಹರಿಹರಾನಂದ ಸರಸ್ವತೀ.

## ತಿರುಮಲೆ -- ತಿರುಪತಿ ದೇವಸ್ಥಾನಗಳು -- ತಿರುಪತಿ.

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನಿ ಯೋಜನೆ

ಶ್ರೀ ವೆಂಕಟೇಶ್ವರಸ್ವಾಮಿಯ ಸನ್ನಿಧಿಯಿರುವ ತಿರುಮಲೆ ಪ್ರಾಚೀನ ಕಾಲದಿಂಲೂ ಯಾತ್ರಿಕರ ಆಕರ್ಷಣಕೇಂದ್ರವಾಗಿದೆ. ಪ್ರತಿದಿನವೂ ಸಾವಿರಾರು ಮಂದಿ ಭಕ್ತ ಯಾತ್ರಿಕರು ತಮ್ಮ ಐಹಿಕ ಆಧ್ಯಾತ್ಮಿಕ ಅಭಿವೃದ್ಧಿಗಾಗಿ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ತಿ. ತಿ. ದೇವಸ್ಥಾನಗಳು ಮಾನವಸೇವೆಯಲ್ಲಿ ಶ್ರದ್ಧಾಪೂರ್ವಕವಾಗಿ ಭಾಗವಹಿಸುವ ಪರಂಪರೆಯನ್ನು ಹೊಂದಿದೆ. ಕುಷ್ಠರೋಗ ನಿವಾರಣಾಕೇಂದ್ರ, ಅಂಗವಿಕಲರ ಅಭಿವೃದ್ಧಿ ಕೇಂದ್ರ, ಅನಾಥ ಶರಣಾಲಯ, ಕೇಂದ್ರ ಆಸ್ಪತ್ರೆ ಮೊದಲಾದವನ್ನು ತಿ.ತಿ.ದೇ. ಯಶಸ್ವಿಯಾಗಿ ನಿರ್ವಹಿಸುತ್ತಿದೆ. ಜನಕ್ಕೆ ವಿಶೇಷ ಆಧುನಿಕ ವೈದ್ಯಕೀಯ ಸೇವೆ ಸಲ್ಲಿಸಲು ಸ್ವಾಮಿಯ ಆಶೀರ್ವಾದದ ಬೆಂಬಲದಿಂದ ಶ್ರೀ ವೆಂಕಟೇಶ್ವರ ವೈದ್ಯಕೀಯ ಸಂಸ್ಥೆ (ಸ್ವಿಮ್ಸ್)ಯನ್ನು -- ದೆಹಲಿ, ಅಜ್ಮೀರ, ಪಾಂಡಿಚೇರಿ, ಚಂಡೀಘರ್‌ಗಳ ಆಲಿಂಡಿಯಾ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಮಾದರಿಯಲ್ಲಿ ಆರಂಭಿಸಲಾಗಿದೆ. ಶ್ರೀ ವೆಂಕಟೇಶ್ವರ ವೈದ್ಯವಿಜ್ಞಾನ ಸಂಸ್ಥೆಯ ಮೂಲ ಉದ್ದೇಶ -- ಮನುಷ್ಯನ ಸರ್ವಾಂಗೀಣ ಆರೋಗ್ಯಸಾಧನೆ -- ಇಲ್ಲಿ ವೈದ್ಯಸೇವೆ, ವೈದ್ಯವಿಜ್ಞಾನದ ಶಿಕ್ಷಣ -- ತರಬೇತಿಗಳೊಡನೆ ಸಂಶೋಧನೆ ಅಭಿವೃದ್ಧಿಯನ್ನೂ ನಡೆಸಲಾಗುವುದು.

ಇಂತಹ ವೈದ್ಯವಿಜ್ಞಾನದ ಬಾಗಿಲು ನಮ್ಮಲ್ಲಿನ ಎಲ್ಲರಿಗೂ ತೆರೆದಿರಬೇಕು. ಅದನ್ನು ಸಾಧಿಸಲೆಂದೇ ಶ್ರೀ ಬಾಲಾಜಿ ಆರೋಗ್ಯವರ ಪ್ರಸಾದಿನಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ವಿಶೇಷ ತಜ್ಞ ವೈದ್ಯಕೀಯ ಸೇವೆಯು ಎಲ್ಲರಿಗೂ ಸುಲಭವಾಗಿ ದೊರೆಯುವಂತೆ ಮಾಡಲು ದಾನಿಗಳಿಂದಲೂ ಸಾರ್ವಜನಿಕರಿಂದಲೂ ಉದಾರವಾದ ದೇಣಿಗೆಗಳನ್ನು ನಿರೀಕ್ಷಿಸಲಾಗಿದೆ.

ಯೋಜನೆಯ ಸಾರಾಂಶ ಹೀಗಿದೆ :---

* ದಾನಿಗಳು ರೂ 1000-- ಅಥವಾ ಗುಣಕಗಳಲ್ಲಿ ದಾನ ನೀಡಬಹುದು. ಅದಕ್ಕೆ ಸಮನಾದ ಧನವನ್ನು ತಿ.ತಿ.ದೇ. ಸೇರಿಸಿ ಮೊತ್ತದ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿರಿಸಿ ಅದರ ಬಡ್ಡಿಯನ್ನು ಬಡವರ, ವೈದ್ಯಕೀಯ ಚಿಕಿತ್ಸೆಗಾಗಿ ಬಳಸಲಾಗುವುದು.
* ಹತ್ತು ಲಕ್ಷ ಹಾಗೂ ಹೆಚ್ಚಿನ ಧನವನ್ನು ನೀಡುವವರ ಹೆಸರಿನಲ್ಲಿ ಒಂದು ಸಂಶೋಧನ ಪೀಠವನ್ನು ಸ್ಥಾಪಿಸಲಾಗುವುದು.
* ದಾನವನ್ನು ವ್ಯಕ್ತಿ / ಕುಟುಂಬ / ಕಂಪನಿ / ಯಾರಾದರೂ ಮಾಡಬಹುದು.
* ಐದು ಲಕ್ಷ ರೂಗಳಿಗಿಂತ ಹೆಚ್ಚಿಗೆ ದಾನ ನೀಡುವವರ ಹೆಸರನ್ನು ಸಂಸ್ಥೆಯ ಸ್ವಾಗತಕಚೇರಿಯಲ್ಲಿ ಬರೆದು ಪ್ರದರ್ಶಿಸಲಾಗುವುದು.
* ಪ್ರಯೋಜನ ಪಡೆದು ಆರೋಗ್ಯಹೊಂದಿದವರ ಡಿಸ್ಚಾರ್ಜ್ ಚೀಟಿಯಲ್ಲಿ ದಾನಿಗಳ ಹೆಸರನ್ನು ನಮೂದು ಮಾಡಲಾಗುವುದು.

## ದಾನಿಗಳಿಗೆ ನೀಡಲಾಗುವ ಸೌಕರ್ಯಗಳು :

* ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನಿ ಯೋಜನೆಗೆ ನೀಡಲಾದ ದಾನ 80 ಜಿ. ಕಲಮಿನನ್ವಯ ಆದಾಯಕರ ಮುಕ್ತ.
* ಆಸ್ಪತ್ರೆಯಲ್ಲಿ ದಾನಿಗಳ ಕುಟುಂಬಕ್ಕೆ ಬಾಡಿಗೆ ಕೋಣೆ ಹವಾನಿಯಂತ್ರಿತ ಕೋಣೆಗಳನ್ನು ನೀಡಲಾಗುವುದು
* 5 ಲಕ್ಷ ಮತ್ತು ಹೆಚ್ಚಿನ ಹಣದ ದಾನಿಗಳ ಹೆಸರಿನಲ್ಲಿ ಬಾಡಿಗೆ ಕೋಣೆಗಳನ್ನೂ ನಿರ್ಮಿಸಲಾಗುವುದು.
* 5 ಲಕ್ಷ ಹಾಗೂ ಹೆಚ್ಚಿನ ಹಣದ ದಾನದಿಂದ ದಾನಿಗಳು ಪ್ರತಿವರ್ಷ ಒಂದು ಚಿಕಿತ್ಸೆಯನ್ನು ಪ್ರಾಯೋಜಿತಗೊಳಿಸಬಹುದು.
* ದಾನಿಗಳು ಒಳರೋಗಿಗಳ, ಹೊರರೋಗಿಗಳ, ಆಹಾರಕ್ಕಾಗಿಯೂ ನೀಡಬಹುದು. ಸಂಸ್ಥೆಯಲ್ಲಿನ ವಾರ್ಷಿಕ ಸಾರಿಗೆ ವೆಚ್ಚಗಳಿಗೂ ನೀಡಬಹುದು.

  ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು -- ನಿರ್ದೇಶಕರು ಶ್ರೀ ವೆಂಕಟೇಶ್ವರ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ -- ಇವರಿಗೆ ಕಳುಹಿಸುತ್ತ ಜೊತೆಗೇ ಕೆಳಕಂಡ ವಿವರಗಳನ್ನೂ ಎಲ್ಲ ದಾನಿಗಳೂ ನೀಡಬೇಕು.

* ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ಹಣ ದಾನಮಾಡುವವರ ಹೆಸರು ವಿಳಾಸಗಳೊಡನೆ ಅವರ ಮನೆಯ ಎಲ್ಲ ಸದಸ್ಯರ ಪಾಸ್‌ಪೋರ್ಟ್ ಸೈಜಿನ ಈಚಿನ ಭಾವಚಿತ್ರ ವಿರಬೇಕು.
* ಆದಾಯತೆರಿಗೆ ವಿನಾಯತಿಯ ಪ್ರಮಾಣ ಪತ್ರವನ್ನು ಯಾರ ಹೆಸರಿಗೆ ನೀಡಬೇಕು ಎಂಬುದು.
* ದಾನಿಗಳು ಇತರತ್ರ ಯಂತ್ರ ಉಪಕರಣಗಳನ್ನು ನೀಡಲೂ ಅವಕಾಶವಿದೆ, ಅಥವಾ ವಾಹನಗಳನ್ನೂ ನೀಡಬಹುದಾಗಿದೆ. ಗ್ರಾಮೀಣ ಪ್ರಾಂತ್ಯಗಳಲ್ಲಿ ತಿ. ತಿ. ದೇವಸ್ಥಾನಗಳ ಆರೋಗ್ಯವಿಸ್ತರಣಾ ಶಿಬಿರಗಳನ್ನೂ ಪ್ರಾಯೋಜಿತಗೊಳಿಸಬಹುದು.

ಮಿಕ್ಕ ವಿಷಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ--

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ, ತಿರುಪತಿ, ದೇವಸ್ಥಾನಗಳು -- ತಿರುಪತಿ.

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್ಸಿಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ.



# ಶ್ರೀ ವೆಂಕಟೇಶ ಭುಜಂಗ ಪ್ರಯಾತ ಸ್ತೋತ್ರ

---ಡಿ. ಕೆ. ಸುಬ್ರಹ್ಮಣ್ಯಂ.

ಅನಂತಂ, ಅಜಂ, ಶಾಶ್ವತ ಬ್ರಹ್ಮರೂಪಂ,
ಸದಾ ವಿಶ್ವಮಾನ್ಯಂ, ವಿಯತ್ ವ್ಯಾಪ್ತ ಗಾತ್ರಮ್,
ಜಗತ್ಕಾರಣಂ, ಕಾರ್ಯರೂಪಂ, ವಿಚಿತ್ರಂ,
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೧

ಸಹಸ್ರಾರ ಪದ್ಮೇಸ್ಥಿತಂ, ಸೂಕ್ಷ್ಮರೂಪಂ,
ಸಹಸ್ರಾಕ್ಷ ಪಾದಂ, ಸದಾನಂದ ರೂಪಮ್,
ವಿಭುಂ, ನಿರ್ಗುಣಂ, ನಿರ್ವಿಕಾರಂ, ನಿರೀಶಂ
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೨

ಸುಪುಷ್ಪೈಃ, ಸುಗಂಧೈಃ, ಸುದೀಪೈಃ, ಸುಪೂಜ್ಯಂ
ಸುವೇಷಂ, ಸುಭದ್ರಂ, ಸದಾ ಹೃದ್ಯ ರೂಪಮ್,
ಲಸದ್ವಜ್ರ ಮಾಣಿಕ್ಯ ತೇಜೋ ವಿರಾಜಂ,
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೩

ಚಿದಾನಂದ, ಚೈತನ್ಯ ಪೂರ್ಣಂ, ವಿಶುದ್ಧಂ,
ಸದಾ ಚಿಂತ್ಯಮಾನಂ, ಚಿದಾ ಭಾಸ ರೂಪಮ್,
ನಿಜಂ, ನಿಷ್ಕಲಂ, ನಿತ್ಯ ತೃಪ್ತಂ, ಚಿದಾತ್ಮಂ,
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೪

ಚಲತ್ಕುಂತಲಂ, ಚಾರುಹಾಸಮ್, ವಿಲಾಸಂ,
ಸುಕೌಶೇಯವಾಸಂ, ಸದಾ ಧಾರ್ಯಮಾಣಮ್,
ಸುಹಸ್ತೇ ಗದಾಂ, ಶಂಖ, ಚಕ್ರಂ ದಧಾನಂ
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೫

ಸದಾ ಗೋಪ ವೃಂದೈಃ ವೃತಂ, ಗೋಪ ಬಾಲಂ
ಕ್ಷಿತಿಂ ಪಾಲಯನ್, ಕ್ಷೇತ್ರಜಾನ್, ರಕ್ಷಮಾಣಮ್
ಸುಗೋವಿಂದ ಘೋಷೇಣ ತೃಪ್ತಂ, ನಿಜೇಶಂ
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೬

ವಿಕುಂ ಠಾಸುತಂ, ಅಚ್ಯುತಂ, ನಾರಸಿಂಹಂ,
ಹೃಷೀಕೇಶ ರೂಪಂ, ಹಿರಣ್ಯಾಕ್ಷ ವೈರಿಮ್
ಮುಕುಂದಂ, ಸದಾ ಕುಂದಪುಷ್ಪೈಃ ಸುಪೂಜ್ಯಂ
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೭

ವಿರಿಂಚಾದಿ ದೇವೈಃ ಸದಾವಂದ್ಯಮಾನಂ,
ಸುರೈರರ್ಚಿತಾಂಘ್ರಿದ್ವಯಂ, ಅದ್ವಯಂ ಚ
ಲಯಂ ಕಾರಯನ್, ಕಾಲರೂಪಂ ದಧಾನಂ,
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೮

ಸುಗೀತಾಂ ಕುರುಕ್ಷೇತ್ರ ಮಧ್ಯೇಬ್ರುವಾಣಂ,
ವಿಭೂತಿ ಸ್ವರೂಪಂ, ಧೃತಂ ವಿಶ್ವರೂಪಮ್
ಧರಾಧಾರಾ ಧರ್ಮಂ, ಸ್ಮೃತಂ ದೇವ ದೈತ್ಯೈಃ
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೯

ಅಭ್ಯರ್ಕ ಬಿಂಬಸ್ಥಿತೈರ್ಯೋಗಿ ವೃಂದೈಶ್ಚ
ಸಂಸೇವ್ಯಮಾನಂ, ಸದಾ ಸುಪ್ರಸನ್ನಮ್
ಸ್ಫುಲಿಂಗೋಜ್ವಲಂ, ದೀಪ್ಯಮಾನಂ ಶರೀರಂ,
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೧೦

ವಸಿಷ್ಠಾದಿ ದೇವರ್ಷಿಭಿಃ ಸ್ತೂಯಮಾನಂ,
ಸಹಸ್ರಾಕ್ಷ ದಿಕ್ಪಾಲ ವೃಂದಾರ್ಚಿತಾಂಘ್ರಿಂ
ಅಕ್ಲೀಬ ವಿದ್ಯುತ್ ಪ್ರಕಾಶೋ ಗ್ರಮಕುಟಂ
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೧೧

ಲಲಾಟೋರ್ಧ್ವತ್ರೈಪುಂಢ್ರ ವಿಭ್ರಾಜಮಾನಂ
ಕರ್ಣದ್ವಯೇ ಕುಂಡಲೌಧಾರ್ಯಮಾಣಮ್
ಸುವಕ್ಷೇ ಚ ಶ್ರೀವತ್ಸ ಲಕ್ಷ್ಮಿಂ ದಧಾನಂ
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೧೨

ಗರುತ್ಮನ್ತ ಮಾರುಹ್ಯ ಸಂಚಾರ್ಯಮಾನಂ,
ವಿಶುದ್ಧ ಪ್ರಕಾಶೇನ ಖದ್ಯೋತ ಮಾನಂ
ಸಮಾಲಿಂಗ್ಯ ರಾಮಾಂ ಸುಖಂ ಸ್ವಾಪಮಾನಂ,
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೧೩

ಸ್ಮಿತ್ರೋದ್ಭೂತ ರಾಕಾಶಶಾಂಕಾಸ್ಯಬಿಂಬಂ,
ಪರಾಜಿತ್ಯ ನೇತ್ರಾಂಶು ಜಾಲೇನ ಭಾನುಮ್
ನಖಜ್ಯೋತಿ ವಿದ್ಯುತ್ಪ್ರಭಾ ಭಾಸಮಾನಂ,
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೧೪

ಪುಮಾಂಸಃ, ಸ್ತ್ರಿಯಃ ಯಸ್ಯ ಶ್ರೀಸನ್ನಿಧಾನೇ,
ಸಮರ್ಪ್ಯ ಸ್ವಕೇಶಾನ್ ವಿಪಾಪಾಭವನ್ತಿ
ನಿಕಾಮಂ ಲಭನ್ತೇಷ್ಟಸಿದ್ಧಿಂ ಸದೈವ,
ಭಜೇ ವೆಂಕಟೇಶಂ, ಸದಾ ಶ್ರೀನಿವಾಸಮ್ ೧೫

ವೇಂಕಟೇಶ ಭುಜಂಗಮಿದಂ ಯಃ ಪಠೇತ್ ಹರಿ ಸನ್ನಿಧೌ
ಶ್ರೀ ವೈಕುಂಠ ಮವಾಪ್ನೋತಿ ಹರಿಣಾ ಸಹಮೋದತೇ

* * * * *

# ಸಾಕೇತ

---ವಿ. ಕೆ. ವಿಶ್ವೇಶ್ವರ.

ಸಾಕೇತೇ ಸ್ವರ್ಣಪೀಠೇ
ಮಣಿಗಣಖಚಿತೇ ಕಲ್ಪವೃಕ್ಷಸ್ಯಮೂಲೇ
ನಾನಾರತ್ನೌಘ ಪೂಜೇ
ಕುಸುಮಿತವಿಪಿನೇ ನೇತ್ರಜಃ ಸ್ವಚ್ಛಕೂಲೇ
ಜಾನಕ್ಯಂಕೇ ರಮಂತಂ
ಸ್ನಪನಯವಿಧೃತಂ ಮಂತ್ರಜಾಪ್ಯೈಕನಿಷ್ಠಂ
ರಾಮಂ ಲೋಕಾಭಿರಾಮಂ
ನಿಜಹೃದಿಕಮಲೇ ಭಾಸಯಂತಂ ಭಜೇಽಹಂ

ದಿವ್ಯವಾದ ಸಾಕೇತ ಲೋಕದಲ್ಲಿ ಭಗವಂತನ ಕಣ್ಣೀರಬಿಂದುಗಳಿಂದ ಉತ್ಪನ್ನವಾದ ಸರಯೂ ನದೀ ತಟದ ನಿರ್ಮಲ ಪ್ರದೇಶದ ಕಾನನದಲ್ಲಿ, ಕಲ್ಪ ವೃಕ್ಷವೊಂದರ ಮೂಲದಲ್ಲಿ ರತ್ನರಾಶಿಯ ಮಧ್ಯೆಸ್ಥಿತ ವಾದ ಸ್ವರ್ಣಮಯಪೀಠದಲ್ಲಿ, ಜಾನಕಿಯ ತೊಡೆ ಯಲ್ಲಿ ದಿವ್ಯಲೀಲೆಯಲ್ಲಿ ತಲ್ಲೀನನಾಗಿರುವ ರಾಜ ನೀತಿ ದುರಂಧರನೂ, ಭಗವತಿಯ ಮಾತ್ಯುಜಪ ದಲ್ಲಿ ಏಕನಿಷ್ಠನಾಗಿರುವವನೂ, ತನ್ನ ಭಕ್ತರ ಹೃದ ಯಕಮಲಗಳನ್ನು ದೆಳಗಿಸುವವನೂ ಆದ ಶ್ರೀರಾ ಮನನ್ನು ನಾನು ಭಜಿಸುತ್ತೇನೆ.

ಕಲಿಯುಗದಲ್ಲಿ ದೇವನ ಪೂಜೆಗೆ ನಾಲ್ಕು ಸಾಧ ನಗಳನ್ನು ಬಳಸಿಕೊಳ್ಳಲಾಗುತ್ತದೆ. ಭಗವಂತನ ಹೆಸರು, ಆತನ ರೂಪ, ಆತನ ಲೀಲೆಗಳು ಮತ್ತು ಅವನ ವಾಸಸ್ಥಾನ -- ಇವುಗಳಲ್ಲಿಯೇ ಆತನ ಅಸ್ತಿ ತ್ವವನ್ನು ಆರೋಪಿಸಿ ಭಕ್ತಿಯಿಂದ ಅರ್ಚಿಸುವ ಮೂಲಕ ಸದ್ಗತಿಯನ್ನು ಪಡೆಯಲು ಪ್ರಯತ್ನಿಸಲಾ ಗುತ್ತದೆ.

ರಾಮಸ್ಯ ನಾಮಾ ರೂಪಂ ಚ
ಲೀಲಾ ಧಾಮ ಪರಾತ್ಪರಮ್
ಏತಚ್ಚತುಷ್ಟಯಂ ನಿತ್ಯಂ
ಸಚ್ಚಿದಾನಂದ ವಿಗ್ರಹಮ್

ಶ್ರೀರಾಮನ ನಾಮ, ರೂಪ, ಲೀಲೆ ಮತ್ತು ಧಾಮ -- ಈ ನಾಲ್ಕು ಪದಾರ್ಥಗಳು ನಿತ್ಯವೂ ಸಚ್ಚಿದಾನಂದಸ್ವರೂಪಿಗಳಾಗಿರುವಂಥವು. ಅವು ಗಳ ಸೇವನೆಯಿಂದ, ಅವುಗಳ ಗುಣ -- ಪ್ರಭಾವ -- ತತ್ತ್ವ -- ರಹಸ್ಯಗಳ ಅರಿಯುವಿಕೆಯಿಂದ ಜೀವನ ಸಫಲತೆಯನ್ನು ಪಡೆಯುತ್ತದೆ.

ವಿಷ್ಣೋಃ ಪಾದ ಅವಂತಿಕಾಂ
ಗುಣವತೀಂ ಮಧ್ಯೇ ಚ ಕಾಂಚೀಪುರಂ
ನಾಭೌ ದ್ವಾರವತೀಂ ತಥಾ ಚ
ಹೃದಯೇ ಮಾಯಾಪುರೀಂ ಪುಣ್ಯದಾಂ
ಗ್ರೀವಾಮೂಲಮುದಾಹರಂತಿ ಮಥುರಾಂ
ನಾಸಾಗ್ರೇ ವಾರಾಣಸೀಂ
ಏತದ್ ವೇದವಿದೋ ವದಂತಿ
ಮುನಯೋಽಯೋಧ್ಯಾಪುರೀಂ ಮಸ್ತಕಂ

ಜಗದೊಡೆಯನಾದ ವಿಷ್ಣುವಿನ ಪಾದಮೂಲ ದಲ್ಲಿ ಉಜ್ಜಯಿನಿ, ಮಧ್ಯಭಾಗದಲ್ಲಿ ಕಾಂಚೀಪುರ ಗಳಿವೆ. ಆತನ ನಾಭಿಯಲ್ಲಿ ದ್ವಾರಕೆಯೂ ಹೃದ ಯದಲ್ಲಿ ಪುಣ್ಯದಾಯಿನಿಯಾದ ಹರಿದ್ವಾರವೂ ಇವೆ. ಅವನ ಕಂಠಮೂಲದಲ್ಲಿ ಮಥುರೆಯಿದ್ದರೆ ಮೂಗಿನ ತುದಿಯಲ್ಲಿ ಕಾಶೀನಗರವಿದೆ. ಅವನ ಮಸ್ತಕದಲ್ಲಿ ಅಯೋಧ್ಯಾಪುರಿಯು ನೆಲೆಸಿದೆ ಎಂಬು ದಾಗಿ ವೇದವಿದರಾದ ಋಷಿಮುನಿಗಳು ಹೇಳು ತ್ತಾರೆ. ಅಂದರೆ, ಪರಮಾತ್ಮನ ಆವಾಸಸ್ಥಾನಗ ಳೆಂದು ನಾವು ಗುರುತಿಸುವ ಪುಣ್ಯಕ್ಷೇತ್ರಗಳಿಗೆಲ್ಲ ಅಯೋಧ್ಯೆಯು ಮಕುಟಪ್ರಾಯವಾಗಿದೆ ಎಂದಂ ತಾಯಿತಲ್ಲವೇ?

ಅಯೋಧ್ಯಾ -- ಅಂದರೆ ದೇವಾಸುರರಿಂದಾ ಗಲೀ, ಶತ್ರುಗಳಿಂದಾಗಲೀ, ಯಾರಿಂದಲೇ ಆಗಲಿ ಯುದ್ಧದಲ್ಲಿ ಜಯಿಸಲು ಅಸಾಧ್ಯವಾದದ್ದು ಎಂದು ಅರ್ಥ. ಸತ್ವಗುಣವಂತನಾದ ವಿಷ್ಣು, ರಜೋಗು ಣಯುತನಾದ ಬ್ರಹ್ಮ ಮತ್ತು ತಮೋಗುಣಯು ಕ್ತನಾದ ಪರಮೇಶ್ವರನಿಂದಲೂ ಅತೀತವಾದದ್ದು ಅಯೋಧ್ಯೆ. ಆದರೂ ಅವರೆಲ್ಲರನ್ನೂ ತನ್ನೊಳಗು ಮಾಡಿಕೊಂಡಿರುವುದು ಅದರ ವೈಶಿಷ್ಟ್ಯ.

ಗೀತೆಯಲ್ಲಿ ಶ್ರೀಕೃಷ್ಣ ಹೀಗೆ ಹೇಳುತ್ತಾನೆ---

ನ ತದ್‌ಭಾಸಯಂತೇ ಸೂರ್ಯೋ
ನ ಶಶಾಂಕೋ ನ ಪಾವಕಃ
ಯದ್ಗತ್ವಾ ನ ನಿವರ್ತಂತೇ
ತದ್ಧಾಮ ಪರಮಂ ಮಮ

"ಈ ಪ್ರಪಂಚವನ್ನು ಪ್ರಕಾಶಿತಗೊಳಿಸುವ ಸೂರ್ಯಚಂದ್ರರಾಗಲೀ, ಅಗ್ನಿಯಾಗಲೀ ನನ್ನ ಪರ ಮಧಾಮವನ್ನು ದೆಳಗಿಸಲು ಸಾಧ್ಯವಿಲ್ಲ. ಯಾಕೆಂ ದರೆ ಅದು ಸದಾ ಸ್ವಯಂಪ್ರಭೆಯಿಂದ ಹೊಳೆಹೊ ಳೆಯುತ್ತಿರುತ್ತದೆ. [ತೇಜೋವಂತನಾದ ಪರಮಾ ತ್ಮನು ಇರುವ ಸ್ಥಳ, ಅದು ಯಾವುದೇ ಆಗಿರಲಿ, ತಾನಾಗಿಯೇ ದೇದೀಪ್ಯಮಾನವಾಗಿ ಪ್ರಕಾಶಿಸದೆ ಇದ್ದೀತೆ?] ಅಂತೆಯೇ ಅಲ್ಲಿಗೆ ತಲುಪಿದವ ರ್ಯಾರೂ ಮರಳಿ ಈ ಪ್ರಾಕೃತ ಬ್ರಹ್ಮಾಂಡಕ್ಕೆ ಬರು ವುದೂ ಸಾಧ್ಯವಿಲ್ಲ." ಇದು ದೇವನಿವಾಸದ ಶ್ರೇಷ್ಠತೆ -- ವಿಶಿಷ್ಟತೆ.

ಸರಯೂ ನದಿಯ ಸೆರಗಿನಲ್ಲಿರುವ ಆ ಪವಿತ್ರಪ್ರ ದೇಶಕ್ಕೆ ಹತ್ತು ಹಲವು ಹೆಸರುಗಳಿವೆ.

ಅಯೋಧ್ಯಾ ನಂದಿನೀ ಸತ್ಯ
ನಾಮಾ ಸಾಕೇತ ಇತ್ಯಪಿ
ಕೋಸಲಾ ರಾಜಧಾನೀ ಚ
ಬ್ರಹ್ಮಪುರಾಪರಾಜಿತಾ

ಅಯೋಧ್ಯಾ, ನಂದಿನೀ, ಸತ್ಯಾ, ಸಾಕೇತ, ಕೋಸಲಾ, ರಾಜಧಾನೀ, ಬ್ರಹ್ಮಪುರ, ಅಪರಾಜಿತಾ -- ಎಂದೆಲ್ಲ ಹೆಸರುಗಳಿಂದ ಶ್ರೀರಾಮನು ಜನ್ಮ ವೆತ್ತಿದ ಸ್ಥಾನವನ್ನು ಕರೆಯಲಾಗುತ್ತದೆ. ವಿಶ್ವದ ಮೊತ್ತಮೊದಲನೆಯ ರಾಜಧಾನಿಯೆಂಬ ಹೆಗ್ಗಳಿ ಕೆಗೆ ಪಾತ್ರವಾದದ್ದು ಅಯೋಧ್ಯ.

ಮನುಃ ಪ್ರಜಾಪತಿಃ ಪೂರ್ವಂ
ಇಕ್ಷ್ವಾಕುಶ್ಚ ಮನೋಃ ಸುತಃ
ತಮಿಕ್ಷ್ವಾಕು ಮಯೋಧ್ಯಾಯಾಂ
ರಾಜಾನಂ ವಿದ್ಧಿಪೂರ್ವಕಮ್

ಮನುಪ್ರಜಾಪತಿಯ ಪುತ್ರನಾದ ಇಕ್ಷ್ವಾಕುವು ಆದಿ ರಾಜನೆಂಬುದಾಗಿ ಹೆಸರು ಗಳಿಸಿದ್ದಾನೆ. ಅಂತಹ ಇಕ್ಷ್ವಾಕುವಿನ ಸಾಮ್ರಾಜ್ಯಕ್ಕೆ ರಾಜಧಾನಿಯಾಗಿದ್ದ ಅಯೋಧ್ಯೆ ಪ್ರಪಂಚದ ಪ್ರಥಮ ರಾಜಧಾನಿ ಯಾಗಿ ಗುರುತಿಸಲ್ಪಟ್ಟಿದೆ. ಆದ್ದರಿಂದ ಮಹಾ ವಿಷ್ಣುವು ತ್ರೇತಾಯುಗದಲ್ಲಿ ಅವತಾರವನ್ನೆತ್ತಿದೇಕಾ ದರೆ ಅದನ್ನೇ ಆರಿಸಿಕೊಂಡುದರಲ್ಲಿ ಆಶ್ಚರ್ಯ ವೇನೂ ಇಲ್ಲ. ಸರಯೂ ನದಿಯ ಜುಳುಜುಳು ಗಾನದ ಹಿನ್ನೆಲೆಯನ್ನೊಳಗೊಂಡ ಸಾಕೇತಪುರಿಯ ದರ್ಶನವು ಪರಮಪುಣ್ಯಪ್ರದವೆಂಬ ನಂಬಿಕೆಯಲ್ಲೂ ಅತಿಶಯವಿಲ್ಲ. ಸ್ಕಂದಪುರಾಣ ಹೇಳುವ ಪ್ರಕಾರ,

**ಶ್ರೀರಾಮನ ಪುಣ್ಯಧಾಮ ಅಯೋಧ್ಯಾನಗರ, ವಾಲ್ಮೀಕಿಯಿಂದ ಬಹುವಾಗಿ ಕೀರ್ತಿತವಾದದದ್ದು. "ಅಯೋಧ್ಯಾ ಮಥುರಾ ಮಾಯಾ....... ಎಂದು ಸಪ್ತಪುರಿ-ಗಳನ್ನು ಮೋಕ್ಷದಾಯಕ ಪುರಗಳೆಂದು ಕರೆದು ಗೌರವಿಸಲಾಗಿದೆ. ಅವುಗಳಲ್ಲಿ ಮೊದ-ಲನೆಯದು ಅಯೋಧ್ಯೆ. ಅದರ ಬಗ್ಗೆ ಪುರಾಣ ವಿವರಗಳನ್ನು ಇಲ್ಲಿ ಕ್ರೋಢೀಕರಿಸಿ ನೀಡಲಾಗಿದೆ.**



T.T. MUTHUPANDAL
(Kalinga Mardhanam)

*Visit....*

# SRI PADMAVATHI DEVI TEMPLE

## TIRUCHANUR



| | | | | |
|---|---|---|---|---|
| 5-00 a.m. | to | 5-30 a.m. | — | Suprabhatam |
| 5-30 a.m. | to | 6-00 a.m. | — | Sahasranama Archana |
| 6-00 a.m. | to | 6-30 a.m. | — | First Bell |
| 6-30 a.m. | to | 11-30 a.m. | — | SARVA DARSAN |
| 11-30 a.m. | to | 12-00 Noon | — | Suddhi & Second Bell |
| 12-00 Noon | to | 6-00 p.m. | — | SARVA DARSAN |
| 6-00 p.m. | to | 6-30 p.m. | — | Suddhi & Third Bell |
| 6-30 p.m. | to | 8-45 p.m. | — | SARVA DARSAN |
| 8-45 p.m. | to | 9-00 p.m. | — | Suddhi |
| 9-00 p.m | to | 9-30 p.m. | — | Ekantha Seva |

**ON FRIDAYS**

| | | | | |
|---|---|---|---|---|
| 9-00 a.m. | to | 10-00 a.m. | — | Abhishekam (Rs. 100/- per head) |

ಕಪಿಲಾ ಗೋಸಹಸ್ರಾಣಿ
ಯೋ ದದಾತಿ ದಿನೇ ದಿನೇ
ತತ್ಫಲಂ ಸಮವಾಪ್ನೋತಿ
ಜನ್ಮಭೂಮೇಃ ಪ್ರದರ್ಶನಾತ್

ಅನುದಿನವೂ ಸಾವಿರಾರು ಕಪಿಲಾ ಗೋವುಗಳನ್ನು ದಾನ ಮಾಡುವಂಥವನಿಗೆ ಯಾವ ಫಲವು ದೊರೆಯುತ್ತದೋ ಅದೇ ಪುಣ್ಯವು ರಾಮಜನ್ಮಭೂಮಿಯ ದರ್ಶನದಿಂದ ದೊರೆಯುತ್ತದೆ.

ಆಶ್ರಮೇ ವಸತಾಂ ಪುಂಸಾಂ
ತಾಪಸಾನಾಂ ಚ ಯತ್ಫಲಂ
ರಾಜಸೂಯ ಸಹಸ್ರಾಣಿ
ಪ್ರತಿವರ್ಷಾಗ್ನಿ ಹೋತ್ರತಃ
ನಿಯಮಸ್ಥಂ ನರಂ ದೃಷ್ಟ್ವಾ
ಜನ್ಮಸ್ಥಾನೇ ವಿಶೇಷತಃ
ಮಾತಾಪಿತ್ರೋರ್ಗುರೂಣಾಂ ಚ
ಭಕ್ತಿಮುದ್ವಹತಾಂ ಸತಾಂ
..............................
..............................
ತತ್ಫಲಂ ಸಮವಾಪ್ನೋತಿ
ಜನ್ಮಭೂಮೇಃ ಪ್ರದರ್ಶನಾತ್

ಆಶ್ರಮವಾಸಿಗಳಾದ ತಪಸ್ವಿಪುರುಷರಿಗೆ ಯಾವ ಫಲ ದೊರೆಯುವುದೋ, ಸಹಸ್ರ ರಾಜಸೂಯ ಯಾಗ ಮಾಡಿದರೆ ಯಾವ ಪುಣ್ಯ ಸಿಗುವುದೋ, ಪ್ರತಿ ವರ್ಷ ಅಗ್ನಿಹೋತ್ರಾದಿಗಳನ್ನು ಮಾಡಿದವನಿಗೆ -- ಯಮನಿಯಮಗಳ ಪಾಲಕನಾದವನಿಗೆ ಯಾವ ಸುಕೃತ ಲಭಿಸುವುದೋ, ಮಾತಾಪಿತೃಗಳ ಮತ್ತು ಗುರುಗಳ ಸೇವೆ ಮಾಡುವುದರಿಂದ ಯಾವ ಸತ್ಫಲ ಪ್ರಾಪ್ತಿಯಾಗುವುದೋ ಅದೇ ಫಲ ಶ್ರೀರಾಮ ಜನ್ಮಭೂಮಿಯ ದರ್ಶನದಿಂದ ದೊರೆಯುತ್ತದೆ.

ನಿಜವಾದ ಸಾಕೇತನಗರಿ ಈ ಭೂಲೋಕದಲ್ಲಿ ಇರುವಂಥದಲ್ಲ. ಅದು ವೈಕುಂಠದ ಒಂದು ಭಾಗವಾಗಿ, ವೈಕುಂಠದಿಂದ ಅಭಿನ್ನವಾಗಿ ಸಾಮಾನ್ಯ ದೃಷ್ಟಿ -- ಬುದ್ಧಿ ಶಕ್ತಿಗಳಿಗೆ ಅತೀತವಾಗಿ ಇರುತ್ತದೆ. ಅದರ ಒದು ಸಣ್ಣ ಅಂಶ ಮಾತ್ರ ಇಂದು ನಾವು ಕರೆವ ಅಯೋಧ್ಯೆಯಲ್ಲಿದೆ. ಪರಮಾತ್ಮನ ನಿಜಧಾಮವಾದ ಸಾಕೇತದ ವರ್ಣನೆ ವಿವಿಧ ವೇದಗಳಲ್ಲಿ, ಶಾಸ್ತ್ರಗಳಲ್ಲಿ ದೊರೆಯುತ್ತವೆ.

ಅಷ್ಟಾ ಚಕ್ರಾ ನವದ್ವಾರಾ
ದೇವಾನಾಂ ಪೂರಯೋಧ್ಯಾ
ತಸ್ಯಾಂ ಹಿರಣ್ಮಯಃ ಕೋಶಃ
ಸ್ವರ್ಗೋ ಜ್ಯೋತಿಷಾವೃತಃ

ಆ ಅಯೋಧ್ಯಾನಗರಿಯು ಎಂಟು ಚಕ್ರಾವರಣಗಳಿಂದಲೂ, ಒಂಭತ್ತು ದ್ವಾರಗಳಿಂದಲೂ ಕೂಡಿದೆ ಮತ್ತು ದಿವ್ಯ ಗುಣವಿಶೇಷಗಳಿಂದ ಯುಕ್ತವಾಗಿದೆ. ಸ್ವರ್ಗದಂತಿರುವ ಆ ಸುಂದರ ನಗರದಲ್ಲಿ ಜ್ಯೋತಿ ಪುಂಜದಿಂದಾವೃತವಾದ ಸ್ವರ್ಣಮಯ ಮಂಟಪವಿದೆ. ಆ ಮಂಟಪದಲ್ಲಿ ಅಯೋಧ್ಯಾನಾಥನು ಉಪಸ್ಥಿತನಾಗಿರುತ್ತಾನೆ. ಅಂತೆಯೇ, ಸಾಕೇತದೊಳಗಡೆ ಶೋಭಾಯಮಾನವಾದ ಶೃಂಗಾರವನ, ಸುಂದರ ವಿಹಾರವನ, ಪಾರಿಜಾತವನ, ಅಶೋಕವನ, ತಮಾಲವನ, ರಸಾಲವನ, ಚಂಪಕವನ, ಚಂದನವನ, ಪ್ರಮೋದವನ, ಶ್ರೀ ನಾಗಕೇಶವನ, ಅನಂತವನ, ರಮ್ಯವಾದ ಕದಂಬವನ -- ಹೀಗೆ ಹನ್ನೆರಡು ಉಪವನಗಳೂ ಇವೆಯಂತೆ. ಆ ದಿವ್ಯ ಅಯೋಧ್ಯಾಪಟ್ಟಣವು ಪಂಚವೈಕುಂಠಗಳಿಗೆ [ಕ್ಷೀರಸಾಗರಸ್ಥ ವೈಕುಂಠ, ರಮಾವೈಕುಂಠ, ಮಹಾವೈಕುಂಠ, ಕಾರಣವೈಕುಂಠ, ಆದಿವೈಕುಂಠ] ಆಧಾರವಾಗಿ ನಿಂತಿರುವುದೆಂದು ಹೇಳಲಾಗಿದೆ.

"ಜನ್ಮಭೂಮಿ ಮಮಪುರೀ ಸುಹಾವನೀ" ಎಂಬಂತೆ ಅಯೋಧ್ಯೆಯು ಶ್ರೀರಾಮನಿಗೆ ಅತ್ಯಂತ ಪ್ರೀತಿಪಾತ್ರವಾದದ್ದು. ಆದರೆ "ಅತ್ಯತಿಷ್ಠದ್ದಶಾಂಗುಲಮ್" ಎಂದೇ ವರ್ಣಿತನಾಗಿರುವ ಆ ಮಹಾದೇವನನ್ನು ಯಾವುದೇ ಒಂದು ಪ್ರದೇಶಕ್ಕೆ ಸೀಮಿತಗೊಳಿಸಲು ನಮ್ಮಿಂದ ಸಾಧ್ಯವೆ? ನಿತ್ಯಸರ್ವಾಂತರ್ಯಾಮಿಯಾದ ಅವನಿಲ್ಲದ ಜಾಗ ಯಾವುದಾದರೂ ಇದೆಯೇ? "ಶ್ರೀರಾಮಚರಿತಮಾನಸ" ದಲ್ಲಿ ಒಂದು ಸುಂದರ ಪ್ರಸಂಗದ ವರ್ಣನೆಯಿದೆ. ಅದರಲ್ಲಿ ಶ್ರೀರಾಮನೇ ವಾಲ್ಮೀಕಿಯೊಡನೆ ತನ್ನ ನಿವಾಸಸ್ಥಾನದ ಬಗ್ಗೆ ಪ್ರಶ್ನಿಸುತ್ತಾನೆ.

ಪೂಂಛೇಹು ಮೋಹಿ ಕಿ ರಹೌ
ಕಹಂ ಮೈ ಪೂಂಛತೆ ಸಕುಚಾವೂಂ
ಜಹಂ ನ ಹೋಹುಂ ತಹಂ
ದೇಹಿ ಕಹಂ ತುಮ್‌ಹಹಿ ದೇಖಾವೂಂ ಠಾವೂಂ

ವಾಲ್ಮೀಕಿಯು, "ಶ್ರೀರಾಮನು ಇರುವ ಸ್ಥಾನವನ್ನು ಎಲ್ಲೆಂದು ವಿವರಿಸಲಿ? -- ನನಗೆ ತುಂಬ ಸಂಕೋಚವಾಗುತ್ತಿದೆ. ಏಕೆಂದರೆ ನೀನು ಇಲ್ಲದೆ ಇರುವ ಸ್ಥಾನ ಯಾವುದಾದರೂ ಇದೆಯೇ?" ಎಂದು ಮರಳಿ ಪ್ರಶ್ನೆ ಎಸೆಯುತ್ತಾನೆ. ಮತ್ತೆ ವಾಲ್ಮೀಕಿಯೇ ಮುಂದುವರಿದು, "ಯಾರು ಭಕ್ತಿಭಾವಭರಿತರೋ, ಯಾರು ಸಮರ್ಪಣಾಶೀಲರೋ, ಯಾರು ಶ್ರೀರಾಮನನ್ನೇ ಸರ್ವಸ್ವವೆಂದು ನಂಬುತ್ತಾರೋ ಅಂಥವರ ಹೃದಯ ಪ್ರದೇಶವೇ ನಿನ್ನ ಪುಣ್ಯಧಾಮವಾಗಿರುತ್ತದೆ!" ಎಂದು ಹೇಳುತ್ತಾನೆ. ಎಂಥ ಅರ್ಥಪೂರ್ಣವಾದ ಮಾತುಗಳಿವು! *

ಸಂದರ್ಶಿಸಿ

ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ಅನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

**ಕಾಲ : ಬೆಳಗ್ಗೆ ೮ ರಿಂದ**

**ರಾತ್ರಿ ೮ ರ ವರೆಗೆ**

**ಟಿಕೆಟ್ ರೂ. ೧--೦೦ (ಹಿರಿಯರಿಗೆ)**

**„ „ ೦--೫೦ (ಕಿರಿಯರಿಗೆ)**

"ತೈಲಧಾರಾವದ ವಿಚ್ಛಿನ್ನ
ಸ್ಮತಿಸಂತತಿಃ ಭಕ್ತಿಃ"

ಎನ್ನುತ್ತಾರೆ, ಎಣ್ಣೆಯಧಾರೆಯಂತೆ ಎಡೆಬಿಡೆ ದಂತೆ ಭಗವಂತನನ್ನು ಯಾವುದಾದರೊಂದು ರೀತಿ ಯಲ್ಲಿ ಸ್ಮರಿಸಿ, ಕೀರ್ತಿಸಿ, ಧ್ಯಾನಿಸಿ, ಅರ್ಚಿಸಿ ಅನೇಕ ವಿಧ ಕೈಂಕರ್ಯಗಳನ್ನು ಮಾಡುತ್ತಿದ್ದರೆ ಅದು ಭಕ್ತಿ ಎನ್ನಿಸುತ್ತದೆ. ಅಂತಹ ಭಕ್ತಿಗಳ ವಿಭಾಗಗಳು 'ಒಂಬತ್ತು" ಇವೆ, ಭಗವಂತನ ಗುಣಶ್ರವಣ, ಅವನ ಕೀರ್ತಿಸಿ, ಸ್ತುತಿಸಿ, ಹಾಡುವುದು ಅವನ ಅವಿಸ್ಮತ ಸ್ಮರಣೆ, ನಮಸ್ಕಾರ ಇತ್ಯಾದಿಗಳು ಇಲ್ಲಿವೆ. ಈ ಚಿಕ್ಕ ಶ್ಲೋಕ ನೋಡಿ.

ಶ್ರವಣಂ ಕೀರ್ತನಂ ವಿಷ್ಣೋಃ
ಸ್ಮರಣಂ ಪಾದ ಸೇವನಂ
ಅರ್ಚನಂ ವಂದನಂ ದಾಸ್ಯಂ
ಸಖ್ಯಂ ಆತ್ಮನಿವೇದನಂ

ಶ್ರವಣಭಕ್ತಿ :-- ಇದು ಪರಮಾತ್ಮನ ಚರಿತ್ರೆ, ಲೀಲೆಗಳು ಮಹಿಮೆ ನಾಮಗಳನ್ನು ಶ್ರದ್ಧೆಯಿಂದ ಕೇಳಿ ಆನಂದಿಸುವುದು. ಇಂತಹ ಶ್ರವಣ ಭಕ್ತಿ ಯಿಂದ 'ಧುಂಧುಕಾರಿ' ಎಂಬ ಮಹಾಪಾಪಿ ಶುದ್ಧ ನಾದ. ಅಲ್ಲದೇ 'ಪರೀಕ್ಷಿತ್ ಮಹಾರಾಜ' ಋಷಿ ಪುತ್ರನ ಶಾಪದಿಂದ ಏಳೇ ದಿನಗಳಲ್ಲಿ ತಾನು ಹಾವು ಕಡಿದು ಸಾಯುವೆನೆಂದು ತಿಳಿದು ಮಹಾಮಹಿಮ ರಾದ ಶುಕಮಹರ್ಷಿಗಳಿಂದ ಭಾಗವತವನ್ನು ಕೇಳಿ ಉನ್ನತ ಪದವಿ ಪಡೆದನೆಂಬುದು ಪ್ರಸಿದ್ಧ.

ಕೀರ್ತನ ಭಕ್ತಿ :-- ಇದು, ಭಗವಂತನ ಲೀಲೆ ಗಳು, ಅವತಾರಗಳು, ಗುಣ, ಕಾರ್ಯ, ನಾಮ ಗಳನ್ನು ಹಾಡಿಹೊಗಳಿ ಮನಸ್ಸಿನ ಕಲ್ಮಷಗಳಿಂದ ಮುಕ್ತರಾಗಿ ಭಗವಂತನ ಕೈಂಕರ್ಯಮಗ್ನರಾಗು ವುದು ಇತ್ಯಾದಿಗಳು. ಇಂತಹ ಭಕ್ತಿ ನಿಷ್ಠರು, ನಾರದ ಮಹರ್ಷಿಗಳು, ತುಂಬುರರು, ವ್ಯಾಸ, ವಾಲ್ಮೀಕಿಗ ಳಂತಹ ಪ್ರಾಚೀನರು, ಚೈತನ್ಯ ಮಹಾಪ್ರಭು, ತ್ಯಾಗ ರಾಜಸ್ವಾಮಿಗಳು, ಕ್ಷೇತ್ರಯ್ಯ ಅನ್ನಮಯ್ಯ ಪುರಂದ ರದಾಸರು, ಕನಕದಾಸರು, ಮೀರಾ, ಕಬೀರ್, ಸೂರ ದಾಸರು, ವಚನಕಾರರೂ, ಇತ್ತೀಚಿನ ವಾಸುದೇವಾ ಚಾರ್ಯರು, ಬಾಲಮುರಳೀಕೃಷ್ಣ ಮುಂತಾದವರು ಕೀರ್ತನ ಭಕ್ತಿ ನಿಷ್ಠ ಮಹಾನುಭಾವರು.

ಸ್ಮರಣ ಭಕ್ತಿ :-- ಇದು ಮನಶ್ಶುದ್ಧಿಕಾರಕ. ಪರ ಮಾತ್ಮನ ಗುಣ, ಸ್ವರೂಪ, ರೂಪಗಳ ಸಂತತ ಚಿಂತನ ಮತ್ತು ರೋಮಾಂಚನೆಯಿಂದ ಮೈಪುಳಕಿ ತವಾಗಿ ಆನಂದಪರವಶರಾಗಿ, ಕುಣಿಯುವುದು, ಮೂರ್ಛಿತರಾಗುವುದು ಮುಂತಾದುವು. "ಚಿಂತ ಯಂತಿ" ಎಂಬ ಗೋಪಿ, ನಮ್ಮಾಳ್ವಾರರು, ಪ್ರಹ್ಲಾದ,

# ನವವಿಧ ಭಕ್ತಿ

---ವ. ಶೇ. ರಾಮಾನುಜಾಚಾರ್ಯ.

ಧ್ರುವ, ಭರತ, ಭೀಷ್ಮ, ಗೋಪಿಗಳು ಇತ್ಯಾದಿಗಳು ಇಂತಹ ಭಕ್ತರು.

ಕೃಷ್ಣನ ಚಿಂತೆಯಲ್ಲೇ ಮಗ್ನಳಾಗಿ "ಚಿಂತ ಯಂತಿ" ಎಂಬ ಗೋಪಿ ರಾತ್ರಿಹಗಲೂ ಅನ್ನಾಹಾರ ಗಳನ್ನು ಬಿಟ್ಟು ಶ್ರೀಕೃಷ್ಣನನ್ನು ಚಿಂತಿಸಿ ಚಿಂತಿಸಿ ದೇಹ ತ್ಯಾಗಮಾಡಿ ಮುಕ್ತಳಾದಳು. ಇನ್ನೊಬ್ಬ ಗೋಪಿ ಭಗವಂತನ ಸ್ಮರಣೆ ಬಿಟ್ಟಿರಲಾರದೇ ಅವನ ನಾಮ ಸ್ಮರಣೆಯಲ್ಲೇ ಲೀನಳಾಗಿ ಪ್ರಪಂಚವೆಲ್ಲಾ ಮರೆತು ಇದ್ದಾಗ ಮನೆಯ ಹಿರಿಯಾಕೆ, ಆಕೆಯನ್ನು ಮೊಸರು ಮಾರಿಕೊಂಡು ಬರುವಂತೆ ಕಳುಹಿಸಿದಾಗ, ಆ ಗೋಪಿ ಭಗವತ್ಸ್ಮರಣೆಯಲ್ಲೇ ಇದ್ದು ಅನ್ಯಮನ ಸ್ಕಳಾಗಿಯೇ ಬೀದಿಯಲ್ಲಿ ಮೊಸರು ಮಾರುವಾಗ ದೇವರ ಹೆಸರುಗಳನ್ನೇ ಕೂಗುತ್ತಾ ಅದನ್ನು ಕೊಳ್ಳಿ ಬನ್ನಿ ಎನ್ನುತ್ತಾಳೆ, ಈ ಶ್ಲೋಕ ಅನೇಕರಿಗೆ ಗೊತ್ತು--

ವಿಕ್ರೇತು ಕಾಮಾಕಿಲಗೋಪಕನ್ಯಾ
ಮುರಾರಿ ಪಾದಾರ್ಪಿತ ಚಿತ್ತ ವೃತ್ತಿಃ
ದಧ್ಯಾದಿಕಂ ಮೋಹವಶಾದವೋಚತ್
ಗೋವಿಂದ ದಾಮೋದರ ಮಾಧವೇತಿ

ಬೀದಿಯಲ್ಲಿ ಗೋವಿಂದ ದೇಕೇ, ದಾಮೋದರ ದೇಕೇ, ಮಾಧವ ದೇಕೇ ಎಂದು ಕೂಗುತ್ತಾ ಹೊರ ಟಳಂತೆ. ಇವಳ ಸ್ಮರಣ ಭಕ್ತಿ ಅನ್ಯಾದೃಶ.

ನಮ್ಮಾಳ್ವಾರರು ಭಗವಂತನ ಕೀರ್ತನೆ ಮಾಡುತ್ತಾ ಅವನ ಸೌಲಭ್ಯಗುಣ ಸ್ಮರಣೆಯಲ್ಲೇ ಮಗ್ನರಾಗಿ, ವಾಚಾಮಗೋಚರನಾದ, ನಿಗಮಗೋಚರನಾದ ಪರಮಾತ್ಮನು ಹೇಗೆ ಕೇವಲ ಒಬ್ಬ ಮಾತೆಯ ಕೈಗೆ ಸಿಕ್ಕಿ ಒರಲಿಗೆ ಹಗ್ಗದಿಂದ ಕಟ್ಟಲ್ಪಟ್ಟು ಬಳ ಲುವಂತೆ ಆದನು, ಏನಾಶ್ಚರ್ಯ - ಏನಾಶ್ಚರ್ಯ ಎಂದು "ಎತ್ತಿರ ಮುರಲಿನೋಡು ಇಣ್ಣೆಂದಿರುಂದು ಏಂಗಿಯ ಉಳಿವೇ" ಎಂದು ತಮ್ಮ ತಿರುವಾಯ್ ಮೊಳಿಯ ಮೊದಲ ಪದಿಕದ ೩ನೇ ತಿರುವಾಯ್ ಮೊಳಿ ಮೊದಲ ಪಾಶುರದಲ್ಲಿ ಆ ಭಗವಂತ ಸೌಲಭ್ಯ ಎಂತಹದು ಆಹಾ ಎಂದು ಆರುತಿಂಗಳು ಮೂರ್ಛೆಯಲ್ಲೇ ಇದ್ದರೆನ್ನುವರು. ಪರಾತ್ಪರನಾದ ಭಗವಂತ ಕೇವಲ ಹೆಂಗಸೊಬ್ಬಳ ಕೈಗೆ ಸಿಕ್ಕಿ ಒರ ಳಿಗೆ ಕಟ್ಟಲ್ಪಟ್ಟು ಕಷ್ಟಪಟ್ಟನಲ್ಲಾ. ಯೋಗಿಗಳಿಗೂ ಸಿಕ್ಕದ ಪರಮಾತ್ಮ ಹೀಗೆ ತನ್ನನ್ನು ಮಾಡಿಕೊಂಡಿ



ದ್ದನ್ನು ನೆನೆದು ಮೂರ್ಛಿತರಾದರು. ಭೀಷ್ಮಗೋಪಿ ಗಳು ಇಂತಹ ಭಕ್ತಿಸಂಪನ್ನರು.

ಪಾದಸೇವನ ಭಕ್ತಿ -- ಭಗವಂತನ ಗುಣ, ಸ್ವರೂಪ, ಸ್ವಭಾವಗಳಿಗೆ ಮಾರುಹೋಗಿ ಅವನ ಚರಣಸೇವೆಯಲ್ಲಿ ಮಗ್ನರಾಗಿ ಅವನ ಕೈಂಕರ್ಯ ವನ್ನೇ ಸರ್ವದೇಶ, ಸರ್ವಕಾಲ ಸರ್ವಾವಸ್ಥೆಗಳಲ್ಲೂ ಮಾಡುವುದು ಈ ಭಕ್ತಿ ಲಕ್ಷಣ. ಶ್ರೀರಾಮ ಸೀತಾ ದೇವಿಯರ ಸೇವೆಯಲ್ಲಿ ಎಲ್ಲಾವಿಧದಲ್ಲೂ ಪಾಲು ಗೊಂಡು, 'ಲಕ್ಷ್ಮಣೋ ಲಕ್ಷ್ಮಿ ಸಂಪನ್ನಃ' ಎಂಬಂತೆ ಕೈಂಕರ್ಯಶ್ರೀ ವಿಭೂಷಿತನಾಗಿದ್ದ. ಹಾಗೆಯೇ ಭರ ತನು ಶ್ರೀರಾಮಪಾದುಕೆಗಳನ್ನು ಪೂಜಿಸುತ್ತಾ ಆ ಪಾದಸೇವಾಮಗ್ನನಾಗಿದ್ದನೆಂಬುದು ಕೇಳಿರುವುದೇ. ಶ್ರೀಲಕ್ಷ್ಮೀದೇವಿಯು ನಿತ್ಯಾನಪಾಯಿನಿಯಾಗಿ ಪರ ಮಾತ್ಮನ ಪಾದ ಸೇವೆ ಮಾಡಿರುವುದು, ದಾಸ ರಾಯರು 'ಏನು ಧನ್ಯಳೋ ಲಕುಮಿ, ಎಷ್ಟು ಮಾನ್ಯಳೋ -- ಕೋಟಿಕೋಟಿ ಭೃತ್ಯರಿರಲು ತಾನೇ ಸೇವೆ ಮಾಡುತಿಹಳು" ಎಂದು ಕೀರ್ತಿಸಿದ್ದಾರೆ. ರಾಮದಾಸನಾದ ಹನುಮಂತ ದಾಸನೇ ಅಲ್ಲದೇ ರಾಮಪಾದಸೇವಾನಿರತ, ಸದಾ ಅವನ ಪಾದವಡಿ ಯಲ್ಲೇ ನಿಂತಿರುವುದು ಎಲ್ಲ ರಾಮರ ದೇವಸ್ಥಾನಗ ಳಲ್ಲೂ ಕಾಣಬಹುದು.

ಅರ್ಚನಭಕ್ತಿ : ಪೂಜನವೇ ಅರ್ಚನ ಭಕ್ತಿ. ತಿರುಪತಿ, ಶ್ರೀರಂಗ, ಕಾಂಚೀ, ಮೇಲುಕೋಟೆ



ಇತ್ಯಾದಿ ನೂರಾರು ದಿವ್ಯದೇಶಗಳಲ್ಲೂ, ಮನೆ ಮನೆಗಳಲ್ಲೂ ಭಗವಂತನ ಮೂರ್ತಿಯನ್ನು ಪ್ರತಿಷ್ಠೆ ಮಾಡಿ, ಅವನಿಗೆ ನಿತ್ಯವೂ ಭಕ್ತಿಪೂರ್ವಕವಾಗಿ ಪೂಜೆಮಾಡಿ, ಅರ್ಘ್ಯಪಾದ್ಯ ಆಚಮನೀಯ, ಸ್ನಾನ, ಪುಷ್ಪ ಸಮರ್ಪಣೆ, ಧೂಪ, ದೀಪ ನೇವೇದ್ಯಗಳನ್ನೆಲ್ಲಾ ಮಾಡುತ್ತಾ ಭಗವಂತನಿಗೆ ಕೈಂಕರ್ಯ ಸಲ್ಲಿಸುವುದು ಸರ್ವವಿದಿತ. ತಿರುಪತಿಯಲ್ಲಂತೂ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಸಂವತ್ಸರೋತ್ಸವಗಳ ಜೊತೆಗೆ ಕಲ್ಯಾಣೋತ್ಸವ, ಗರುಡೋತ್ಸವ, ವಸಂತೋತ್ಸವ ಬ್ರಹ್ಮೋತ್ಸವ ಶಯನೋತ್ಸವಾದಿ ಅನೇಕ ವಿಧ ಉತ್ಸವಗಳೂ, ನಿತ್ಯಸುಪ್ರಭಾತ, ತಿರುಮಂಜನ, ಅಲಂಕಾರ, ಏಕಾಂತೋತ್ಸವ ಛತ್ರಚಾಮರಾದಿ ಸೇವೆಗಳನ್ನೆಲ್ಲಾ ಈ ಅರ್ಚನಾಭಕ್ತಿಯ ಅನೇಕ ಅಂಗಗಳಾಗಿ ಮುಖ್ಯಾಂಶಗಳಾಗಿವೆ. ಇದರಿಂದ ಜನರು ಪಡೆಯುವ ಆನಂದ ವರ್ಣಿಸಲು ಸಾಧ್ಯವೇ ಇಲ್ಲ. ಐದಾರುಗಂಟೆ ಸಾಲಿನಲ್ಲಿ ನಿಂತು ಐದಾರು ಸೆಕೆಂಡುಗಳ ಭಗವಂತನ ದರ್ಶನ ಪಡೆದು ಜನ್ಮಸಾರ್ಥಕವಾಯಿತೆಂದು ಆನಂದಿಸುವುದನ್ನು ಇಂದಿಗೂ ತಿರುಪತಿಯಲ್ಲಿ ವೆಂಕಟಾಚಲಪತಿಯ ಸನ್ನಿಧಾನದಲ್ಲಿ ಕಾಣಬಹುದು. ಇದೆಲ್ಲಾ ಅನುಭವಿಸಿ ನೋಡಿದ್ದೇವೆ. ರಾಜಾ ಪೃಥು, ಅಂಬರೀಷ ಇತ್ಯಾದಿಗಳು ಅರ್ಚನಾಭಕ್ತಿಪೂರ್ಣರು.

ವಂದನಭಕ್ತಿ : ಸಕಲ ಮನುಜನಯನ ಗೋಚರನಾಗಿ, ಸುಲಭನಾಗಿ, ಅವರವರ ಇಷ್ಟ ಮೂರ್ತಿಯಾಗಿದ್ದು ಎಲ್ಲರ ಸೇವೆಯನ್ನೂ ಕೈಗೊಳ್ಳುತ್ತಾ ಅವರವರ ಹರಕೆಗಳನ್ನೂ ಇಷ್ಟಾರ್ಥಗಳನ್ನೂ ಪೂರೈಸುತ್ತಾ ಅನುದಿನವೂ ಸಾಷ್ಟಾಂಗನಮಸ್ಕಾರಗಳನ್ನು ಸ್ವೀಕರಿಸುತ್ತಾ ಭಕ್ತರಿಗೆ ಆನಂದತಂದುಕೊಡುವ ಭಗವಂತನ ಕಾರ್ಯಕ್ಕೆ ಪೂರಕ ಈ ನಮನ. ಅಕ್ರೂರ, ವಿದುರ ಮುಂತಾದವರು ಪಾವನರಾದುದು ಈ ರೀತಿಯ ಭಕ್ತಿಯಿಂದ. ವಂದನೆ ಮಾಡುವುದು ದೇವರ ಪಾದಪದ್ಮಗಳಲ್ಲಿ. ಕಷ್ಟಕಾಲದಲ್ಲಿ ನೆನೆವುದು ಅವನ ಪಾದಗಳನ್ನೇ. ಹಿಡಿಯುವುದು ಅವನ ಪಾದಗಳನ್ನೇ. ಅವನ ತಲೆಯನ್ನೋ ಕೈಯನ್ನೋ ಅಲ್ಲ. ಏಕೆ ಹೀಗೆ ಅಂದರೆ ಕರುವಾದುದು ಹಸುವಿನ ಎಲ್ಲಾ ಅಂಗಗಳೂ ಇರುವಾಗ ಕೆಚ್ಚಲಿಗೇ ಬಾಯಿ ಹಾಕಿ ಹಾಲುಪಡೆದು ಕುಣಿದಾಡುತ್ತದೆ. ಹೀಗೆ ನಮಗೆಲ್ಲಾ ಅವನ ಪಾದವೇ ಗತಿ. ಅದೇ ಮೋಕ್ಷಪ್ರದ. ಅವನ ಪಾದವೇ ನಮಗೆ ರುಚಿ. ಇದಕ್ಕೇ ಇರಬಹುದು ಸ್ವಾಮಿ ಪ್ರಳಯಕಾಲ ಆಲದ ಎಲೆಯ ಮೇಲೆ ಮಲಗಿ ಚೇತನಾಚೇತನಗಳನ್ನು ತನ್ನ ಹೊಟ್ಟೆಯಲ್ಲಿಟ್ಟುಕೊಂಡು, ಭಕ್ತರು ಹಿಡಿಯುವ ಕಾಲನ್ನೇ ತನ್ನ ಬಾಯಲ್ಲಿಟ್ಟುಕೊಂಡು ಅದರ ಮಧುರವಾದ ಮಧುವಿನಿಂದ ಹೊಟ್ಟೆಯಲ್ಲಿರುವ ಚರಾಚರಗಳನ್ನು ಪಾಲಿಸುತ್ತಾನೆ. ವೇದ ಹೇಳುತ್ತದೆ -- 'ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ'. ಅರ್ಥಾತ್ ವಿಷ್ಣುಪಾದದಲ್ಲಿ ಜಗತ್ಪಾಲನೆಗಾಗಿ 'ಮಧು' ಉಂಟಾಗುತ್ತದೆ. ಅದನ್ನೇ ಚೇತನಾ ಚೇತನಗಳಿಗೆ ಉಣಿಸಿ ಬದುಕಿಸಿ ಪುನಃ ಸೃಷ್ಟಿಮಾಡುತ್ತಾನೆ. ಅರ್ಚನೆಯಂತೆ, ವಂದನೆಯೂ ನಾವೆಲ್ಲರೂ ನಮ್ಮ ಕಣ್ಣಿಗೆ ಗೋಚರನಾಗಿ ಬೆಳಸುವ ಅರ್ಚಾಮೂರ್ತಿಗಳ ಸನ್ನಿಧಿಯಲ್ಲಿ ಇಂದಿಗೂ ಎಂದೆಂದಿಗೂ ಮೋಕ್ಷ ಪಡೆಯುವುದಕ್ಕಾಗಿ.

ದಾಸ್ಯಭಕ್ತಿ : 'ದಾಸಭೂತಾಪೃಥಸರ್ವೇ', 'ಆತ್ಮದಾಸ್ಯಂ ಹರೇಃ ಸ್ವಾಮ್ಯಂ ಸ್ವಭಾವಂ ಚ ಸದಾಸ್ಮರ', 'ತ್ವದ್ದಾಸದಾಸ ಪರಮಾವಧಿ ದಾಸದಾಸಾಃ', 'ತದ್ಭೃತ್ಯ ಪರಿಚಾರಕ ಭೃತ್ಯಭೃತ್ಯಃ', 'ಶುಡರಡಿ ತೊಳುದೆಳಿನ್ನವೇ', 'ಉನ್ನತಿಕ್ಕಳ್ ಅಡಿಯೇರ್ಣ ಮೇಪ್ಪವದೇ', 'ಅಡಿಕ್ಕೀಳ್ ಅಮರ್‌ನ್ದು ಪುಕುಂದೇನೇ' ಎಂದು ವೇದಪುರಾಣ ಸ್ತೋತ್ರಗಳಲ್ಲೂ ದ್ರಾವಿಡ ವೇದಗಳಲ್ಲೂ ವಿಪುಲವಾಗಿಯೂ, ಲಕ್ಷ್ಮಣನು 'ಗುಣೈಃ ದಾಸ್ಯಮುಪಾಗತಃ' ಎಂದೂ ಹನುಮಂತನು ರಾವಣನಿಗೆ ತನ್ನ ಪರಿಚಯ 'ದಾಸೋಹಂ ಕೋಸಲೇಂದ್ರಸ್ಯ' ಎಂದೂ ತಿಳಿಸುತ್ತಾನೆ. ಶ್ರೀ ವೈಷ್ಣವರು ಪರಸ್ಪರ 'ಅಡಿಯೇರ್ಣ' ಎಂದೂ 'ದಾಸರ್ಣ' ಎಂದು ಹೇಳು

ತ್ತಾರೆ. ಶ್ರೀರಾಮಾನುಜರ ಶರಣಾಗತಿ, ವೈಕುಂಠಗದ್ಯಗಳಲ್ಲಿ ಈ ದಾಸ್ಯವನ್ನೇ ಪ್ರಾರ್ಥಿಸಿದ್ದಾರೆ. ಲಕ್ಷ್ಮಣ, ಭರತ, ಹನುಮಾದಿಗಳು ಇಂತಹ ಭಕ್ತ ಧುರೀಣರು. ಯಾಮುನಾಚಾರ್ಯರು ತಮ್ಮ ಸ್ತೋತ್ರ ರತ್ನದಲ್ಲಿ 'ಕದಾ.......... ತ್ವಚ್ಚರಣಾಂಬುಜದ್ವಯ ಮದೀಯ ಮೂರ್ಧಾನಂ ಅಲಂಕರಿಷ್ಯತಿ, ಎಂದರೆ, ರಾಮಾನುಜರು ತಮ್ಮ ಶರಣಾಗತಿಗದ್ಯದಲ್ಲಿ 'ದಾಸ ಭೂತಃ ಶರಣಾಗತೋಸ್ಮಿ -- ತವಾಸ್ಮಿದಾಸಃ' ಎಂದಿದ್ದಾರೆ. ವೈಕುಂಠಗದ್ಯದಲ್ಲಿ 'ಮಾಂ...... ಪರಿಚರ್ಯಾ ಕರಣಾಯ ಪರಿಗೃಹ್ಣಿಷ್ವ' ಎಂದು ಪ್ರಾರ್ಥಿಸಿದ್ದಾರೆ. ಕೆಲವರಂತೂ ರಾಮದಾಸ, ಸೂರದಾಸ, ಕಬೀರ್ ದಾಸ, ಕನಕದಾಸ, ಪುರಂದರದಾಸ ಎಂದೇ ಪ್ರಸಿದ್ಧರಾಗಿದ್ದಾರೆ.

ಸಖ್ಯಭಕ್ತಿ : 'ಪಿತಾತ್ವಂ ಮಾತಾ ತ್ವಂ..... ಪ್ರಿಯ ಸುಹೃತ್', 'ತ್ವಮೇವ ತ್ವಂಮಿತ್ರಂ', 'ಮಿತ್ರಭಾವೇನ' ಇತ್ಯಾದಿಗಳಂತೆ ಭಗವಂತನ ಪ್ರಿಯಸ್ನೇಹಿತರಾಗಿ ತನ್ನ ಮಿತ್ರನ ಸಕಲ ಕಾರ್ಯಗಳಲ್ಲೂ ಸಹಾಯಕರಾಗಿ ಅವನನ್ನು ಹೃದಯ ಪೂರ್ವಕ ಸೇವೆಮಾಡುತ್ತಾರೆ. ಅರ್ಜುನ, ಕುಚೇಲ, ಉದ್ಧವ ಮುಂತಾದವರು ಇಂತಹ ಸಖ್ಯ ಭಕ್ತಿ ಪ್ರವೀಣರು.

ಆತ್ಮನಿವೇದನ ಭಕ್ತಿ : ತನ್ನನ್ನು ತಾನೇ ಅಹಂಕಾರ ಮಮಕಾರ ರಹಿತನಾಗಿ, ನಿರ್ಭಯೋ ನಿರ್ಭಯೋಸ್ಮಿ-- ನಿರ್ಭರೋಸ್ಮಿಎಂದು ಸ್ವಸ್ವಾತಂತ್ರ್ಯ ಬುದ್ಧಿ ಬಿಟ್ಟುಸರ್ವಸಮರ್ಪಣೆ ಮಾಡಿ ಭಗವಂತನಿಗೆ ಅನನ್ಯಾರ್ಹ ಶೇಷಭೂತನಾಗಿ, ಅನನ್ಯ ಶರಣ್ಯನಾಗಿ, ಅನನ್ಯ ಭೋಗ್ಯನಾಗಿ ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದಂತೆ ಸರ್ವಧರ್ಮಗಳನ್ನೂ ತ್ಯಾಗಮಾಡಿ, ತನ್ನತನ ತ್ಯಾಗಮಾಡಿ ಭಗವಂತನೇ ಗತಿ ಎಂದು ಸರ್ವಭಾರಗಳನ್ನೂ ಆತನಿಗರ್ಪಿಸಿ ಶರಣಾಗತನಾಗುವುದು. 'ಕಣ್ಣನಲ್ಲಾಲ್ ದೈವಮಿಲ್ಲೈ', 'ಉನ್ನಾಲಲ್ಲಾಲ್ ಯಾವರಾಲುಂಬನ್ನುಂ ಕುರೈವೇಂಡೇನ್' ಎಂದಿರುವುದು (ಕೃಷ್ಣನ ಹೊರತಾದ ದೈವ ಇಲ್ಲ. ನಿನ್ನ ಬಿಟ್ಟರೆ ಬೇರೊಬ್ಬರಿಂದ ನನಗೇನೂ ಆಗಬೇಕಾಗಿಲ್ಲ. ಇತ್ಯಾದಿ) ಸ್ವಾಮಿ ವೇದಾಂತ ದೇಶಿಕರ ಈ ವಾಕ್ಯ ಅತ್ಯದ್ಭುತ-- 'ತ್ವಯಿರಕ್ಷತಿ ರಕ್ಷಕೈಃ ಕಿಮನ್ಯೈಃ -- ತ್ವಯ್ಯರಕ್ಷತಿ ರಕ್ಷಕೈಃ ಕಿಂ ಅನ್ಯೈಃ' (ನೀನು ರಕ್ಷಿಸುತ್ತಿರಲು ಬೇರೆ ರಕ್ಷಕರೇಕೆ ಬೇಕು. ನೀನು ರಕ್ಷಿಸದಿದ್ದರೆ, ಬೇರೆ ರಕ್ಷಕರೇನು ತಾನೇ ಮಾಡಬಲ್ಲರು.) ವಿಭೀಷಣ ಬಲಿಚಕ್ರವರ್ತಿ, ಗೋಪಿಗಳು-- ಈ ರೀತಿಯ ಉಜ್ವಲ ಭಕ್ತ ಶಿಖಾಮಣಿಗಳು.

ಭಗವಂತನ ದಿವ್ಯ ಚರಿತ್ರೆ, ಮಹಿಮೆ, ಗುಣಾದಿಗಳನ್ನು ಪ್ರೇಮಭಕ್ತಿ ಪೂರ್ವಕವಾಗಿ ಕೇಳಬೇಕು. ಕೇಳಿದ್ದನ್ನು ಹಾಡಿ ಆಡಬೇಕು. ನಮ್ಮನ್ನು ಮಾನವನನ್ನಾಗಿ ಸೃಷ್ಟಿಸಿದವನ ಸ್ಮರಣೆ ಮಾಡಬೇಕು. ಅವನ ಪಾದಸೇವನ ಮಾಡಿ, ಅವನನ್ನು ಪೂಜಿಸಿ, ನಮಿಸಿ, ದಾಸನಾಗಿ, ಸಖನಾಗಿ ತನ್ನನ್ನೇ ಅವನಿಗರ್ಪಿಸಿ ದೃಢವಿಶ್ವಾಸದಿಂದ ನಿರ್ಭಯನಾಗಿಯೂ, ನಿರ್ಭರನಾಗಿಯೂ ಇರಬೇಕು. ಇವೇ ಒಂಬತ್ತು ವಿಧವಾಗಿ ಭಕ್ತಿಗಳು.

ಭಗವಂತ ಭಕ್ತವತ್ಸಲ, ಭಕ್ತಪರಿಪಾಲ, ಭಕ್ತರು ಹೇಳಿದ್ದೆಲ್ಲಾ ಮಾಡುವ ಭಕ್ತವಿಧೇಯ, ಅವನಿಗೆ ಎರಡು ಕೈಗಳನ್ನೂ ಜೋಡಿಸಿದರೆ, ನನ್ನದೇನೂ ಇಲ್ಲ. ಎಲ್ಲಾ ನಿನ್ನದೇ ಎಂಬ ಸರ್ವಸಮರ್ಪಣ ಭಾವ ಎದ್ದು ನಿಲ್ಲುತ್ತದೆ. ಹಿರಿಯರು ಹೋಮಾದಿಗಳನ್ನು ಮಾಡಿದರೆ 'ಸ್ವಾಹಾ' ಅಥವಾ 'ನಮಃ' ಎಂದು ಹೇಳಿದ ಕೂಡಲೇ 'ಇದಂ ನ ಮಮ' ಎಂದು ಹೇಳುವರಲ್ಲವೇ. ಇಂತಹ ಭಕ್ತಿಯನ್ನು ನಮ್ಮ ಆಚಾರ್ಯರಲ್ಲೂ, ಎಲ್ಲಾ ಭಗವದ್ಭಕ್ತರಲ್ಲೂ ಮಾಡಿದರೆ ಅದು ಭಗವಂತನಿಗೆ ಅತ್ಯಂತ ಪ್ರೀತಿ ಸಂತೋಷಗಳನ್ನು ತರುತ್ತವೆ. ಇದು ಪಂಚಮೋಪಾಯ ಎಂದು ಪ್ರಸಿದ್ಧ.

## ನವವಿಧ ಸಂಬಂಧಗಳು :

ಆಚಾರ್ಯರು ತತ್ವೋಪದೇಶ ಮಾಡುವಾಗ ಮುಖ್ಯವಾಗಿ ನಮಗೂ ದೇವರಿಗೂ ಇರುವ ಸಂಬಂಧಗಳು 'ಒಂಬತ್ತು' ಎಂದಿದ್ದಾರೆ. ಅವು:--

ಪಿತಾ ಚ ರಕ್ಷಕ ಶ್ಶೇಷೀ
ಭರ್ತಾ ಜ್ಞೇಯೋ ರಮಾಪತಿಃ
ಸ್ವಾಮ್ಯಾಧಾರೋ ಮಮಾತ್ಮಾ ಚ
ಭೋಕ್ತಾ ಚೌದ್ಯಮನೂದಿತಃ

ಎಂಬ ಶ್ಲೋಕದಲ್ಲಿ ಅಡಗಿಸಿಟ್ಟಿದ್ದಾರೆ.

೧) ಪಿತಾ--ಪುತ್ರಸಂಬಂಧ :-- ಅವನು ನಮ್ಮನ್ನೆಲ್ಲಾ ಸೃಷ್ಟಿಮಾಡಿದವನಾದುದರಿಂದ ಅವನು ನಮಗೆಲ್ಲಾ ತಂದೆ. 'ಪಿತಾಸಿ ಲೋಕಸ್ಯ', 'ಸರ್ವಹ್ಯೇದಂ ಬ್ರಹ್ಮಣಾ ಹ್ಯೇವ ಸೃಷ್ಟಂ', 'ಯತೋವಾ ಇಮಾನಿ ಭೂತಾನಿ ಜಾಯಂತೇ', 'ತತ್ಸೃಷ್ಟ್ವಾ', 'ಯೋನಿಶ್ಚಹಿಗಾಯತೇ', 'ಸಕಾರಣಂ ಕಾರಣಾಧಿಪ', 'ನಿಖಿಲಜಗದುದಯಲಯಲೀಲ', ಮುಂತಾದುವು ವೇದ, ಇತಿಹಾಸ, ಬ್ರಹ್ಮಸೂತ್ರ ಸ್ತೋತ್ರಾದಿಗಳಲ್ಲಿಯ ಪ್ರಮಾಣಗಳು.

೨) ರಕ್ಷ್ಯರಕ್ಷಕ ಸಂಬಂಧ :-- ಹುಟ್ಟಿಸಿದವನೇ ರಕ್ಷಣೆಯ ಹೊರೆ ಹೊರಬೇಕಲ್ಲವೇ. ನಾವೆಲ್ಲಾ ರಕ್ಷ್ಯರು. ಅವನು ಸಕಲ ಜಗದ್ರಕ್ಷಕ 'ಓಂ' ಕಾರದಲ್ಲಿ ಮೊದಲಕ್ಷರ 'ಅಕಾರ' ಅವರಕ್ಷಣೇ ಎಂದು ಧಾತ್ವರ್ಥ. ಇದರಿಂದ ಪರಮಾತ್ಮ ಚೇತನಾಚೇತನರನ್ನು ರಕ್ಷಿಸುವವನು ಎಂದಿದೆ. 'ತನ್ನುಳ್ಳೇ ಆಹಿಯುಂ ಆಕ್ಕಿಯುಂ ಕಾಕ್ಕುಂ' (ತನ್ನಲ್ಲಿಯೇ ಅಡಗಿಸಿಟ್ಟುಕೊಂಡು, ಸೃಷ್ಟಿಸಿ ರಕ್ಷಿಸುತ್ತಾನೆ) 'ಮೂವುಲಕ್ಕುಂ ಕಾಪ್ಪವನ್' (ಮೂಜಗಗಳ ರಕ್ಷಕ) ಮುಂತಾದುವುಗಳು ಪ್ರಮಾಣಗಳು.

೩) ಶೇಷ--ಶೇಷಿ ಸಂಬಂಧ :-- ಸಕಲ ವಿಧ ಸೇವೆಗಳನ್ನು ಮಾಡುತ್ತಾ ಆಯಾಯಾ ಸೇವೆಗೆ ಅನುಗುಣವಾಗಿ, ಶರೀರವನ್ನು ಬದಲಾಯಿಸಿಕೊಂಡು ಸದಾ ಸರ್ವಕಾಲ ಭಗವತ್ಕೈಂಕರ್ಯ ಮಾಡುವ ಪ್ರಥಮ ಶೇಷಭೂತ -- ಆದಿ ಶೇಷ' ಆಳವಂದಾರರು 'ನಿವಾಸಶಯ್ಯಾಸನ ಪಾದುಕಾಂಶುಕೋ.......ಶರೀರಬೇಧೈಃ ...... ಶೇಷ ಇತೀರತೇಜನೈಃ' ಎಂದಿದ್ದಾರೆ. ತಿರುವಾಯ್‌ಮೊಳಿಯಲ್ಲಿ 'ಶೆನ್ನಾಲ್‌ಕುಡೈಯಾಂ...... ತಿರುಮಾರ್ಕು ಅರವು' ಎಂದು ಇದೇ ಅಭಿಪ್ರಾಯವನ್ನು ನಮ್ಮಾಳ್ವಾರರು ಹೇಳಿದ್ದಾರೆ. ನಮ್ಮೆಲ್ಲರ ಕೈಂಕರ್ಯಕ್ಕೂ ಅವನೇ ಕೈಂಕರ್ಯಪರನು.

೪) ಭರ್ತಾ--ಭಾರ್ಯಾ ಸಂಬಂಧ :-- 'ಪತಿಂ ವಿಶ್ವಸ್ಯ', 'ವೀಡುಡೈಯಾನ್', 'ಭರ್ತಾ ಸರ್ವಸ್ಯ ಲೋಕಸ್ಯ', 'ಸ ಏವ ವಾಸುದೇವೇ ಸೌಸಾಕ್ಷಾತ್ ಪುರುಷ ಉಚ್ಯತೇ', 'ಸ್ತ್ರೀ ಪ್ರಾಯಮಿತರತ್ ಸರ್ವಂ ಜಗತ್ ಎಂಬಂತೆ ಅವನು ಪುರುಷೋತ್ತಮ. ನಾವೆಲ್ಲಾ ಅವನ ಪತ್ನಿಯರಂತೆ ಗೀತೆಯಲ್ಲಿಯೂ 'ಪ್ರಧಾನ ಕ್ಷೇತ್ರಜ್ಞ ಪತಿಃ ಗುಣೇಶಃ' ಎನ್ನುವರು. (ಶ್ವೇತಾಶ್ವತರ ಉಪನಿಷತ್)

೫) ಜ್ಞೇಯಃ--ಜ್ಞಾತೃ ಸಂಬಂಧ :-- 'ಜಾನಾತ್ಯೇವಾಯಂ ಪುರುಷಃ', 'ತಮೀಶ್ವರಾಣಾಂ ಪರಮಂ' ಅವನನ್ನು ತಿಳಿದುಕೊಳ್ಳುವವರು ನಾವು. ತಿಳಿದುಕೊಳ್ಳಬೇಕಾದ ಪರಮ ತತ್ವ 'ಅವನು'. ಇದೇ ನಮಗೂ ಅವನಿಗೂ ಇರುವ ಜ್ಞೇಯ--ಜ್ಞಾತೃ ಸಂಬಂಧ.

೬) ಸ್ವಾಮಿ--ದಾಸ ಸಂಬಂಧ :-- 'ಈಶಾನಃ ಸರ್ವ ಭೂತಾನಾಂ', 'ಸ್ವತ್ವ ಮಾತ್ಮನಿ ಸಂಜಾತಂ -- ಸ್ವಾಮಿತ್ವಂ ಬ್ರಹ್ಮಣಿಸ್ಥಿತಂ' (ಜಗತ್ತೆಲ್ಲಾ ಅವನ ಸೊತ್ತು -- ಅವನು ಈ ಸೊತ್ತಿಗೆ ಏಕಸ್ವಾಮಿ) 'ಆತ್ಮದಾಸ್ಯಂಹರೇಃ ಸ್ವಾಮ್ಯಂ ಸ್ವಭಾವಂ ಚ ಸದಾಸ್ಮರ' ಎಂಬಂತೆ ಆತ್ಮನ ದಾಸ್ಯವನ್ನೂ, ಪರಮಾತ್ಮನ ಸ್ವಾಮಿತ್ವವನ್ನು ತಿಳಿದವನೇ ಪ್ರಾಜ್ಞ. ಇದನ್ನೆಂದಿಗೂ ಮರೆಯಬಾರದು.

೭) ಆಧಾರ--ಆಧೇಯ ಸಂಬಂಧ :-- ಅಷ್ಟಾಕ್ಷರಿ ಮಂತ್ರದಲ್ಲಿ ನಾರಾಯಣ ಪದಕ್ಕೆ ಅರ್ಥ ಹೇಳುವಾಗ 'ನಾರಾಣಾಂ -- ನಿತ್ಯ ವಸ್ತೂನಾಂ ಅಯನಂ -- ಗೃಹಂ ಎಂದೂ, ನಾರಾಃ -- ನಿತ್ಯ ವಸ್ತುಗಳು (ನಾಶವಾಗದ ಎಲ್ಲಾ ವಸ್ತುಗಳು ಚಿತ್ -- ಅಚಿತ್ ಎಂಬ ಎರಡು ತತ್ವಗಳು) ಅಯನಂ

ಯಸ್ಯ ಯಾವನಿಗೆ ನೆಲೆಯಾಗಿದೆಯೋ ಎಂದು ಭಗವಂತನು ಎಲ್ಲರಿಗೂ ವಸತಿಗೃಹದಲ್ಲಿ ಆಧಾರನಾಗಿದ್ದಾನೆಂದೂ ಸಕಲ ಆತ್ಮಗಳಲ್ಲೂ ಭಗವಂತನು ಅಂತರ್ಯಾಮಿ ಆಗಿ ನೆಲಸಿದ್ದಾನೆಂದೂ ಹೇಳಿ ಆತ್ಮ ಪರಮಾತ್ಮರಿಗೆ 'ಆಧಾರಾಧೇಯ ಸಂಬಂಧ' ಹೇಳುವರು. 'ನಿಖಿಲ ಜಗದಾಧಾರ (ಶ್ರೀರಂಗಗದ್ಯ) 'ಈಶ್ವರಸ್ಸರ್ವ ಭೂತಾನಾಂ ಹೃದ್ದೇಶೇರ್ಜುನತಿಷ್ಠತಿ', 'ಮಯಿಸರ್ವಮಿದಂ ಪ್ರೋಕ್ತಂ ಸೂತ್ರೇ ಮಣಿಗಣಾ ಇವ (ಸೂತ್ರದಲ್ಲಿ ಮಣಿಗಳಂತೆಯೂ, ಮಣಿಗಳೆಲ್ಲಾ ಸೂತ್ರದಲ್ಲೂ ಇರುವಂತೆ ಸರ್ವರಲ್ಲೂ ಪರಮಾತ್ಮವ್ಯಾಪ್ತಿ, ಸರ್ವಾತ್ಮಗಳೂ ಪರಮಾತ್ಮನನ್ನು ಆಧಾರಿಸಿ ಇದ್ದಾರೆ.) ಎಂಬುದು ಇದರ ಸಾರಾರ್ಥ.

೮) ಆತ್ಮ ಪರಮಾತ್ಮ ಸಂಬಂಧ :-- 'ವಕ್ಷಸರ್ವಭೂತಾಂತರಾತ್ಮಾ', 'ಈಶ್ವರಸ್ಸರ್ವ ಭೂತಾನಾಂ ಹೃದ್ದೇ ಶೇರ್ಜುನತಿಷ್ಠತಿ' (ಗೀತೆ)ಯ ಆತ್ಮನಿತಿಷ್ಠ (ಬೃ.ಉಪ.) 'ತಾನಿಸರ್ವಾಣಿ ತದ್ವಪುಃ' (ವಿ.ಪು.) ತತ್‌ಸೃಷ್ಟ್ವಾ ತದೇವಾನು ಪ್ರಾವಿಶತ್' ಇತ್ಯಾದಿ ಪ್ರಮಾಣಗಳಂತೆ ಭಗವಂತ ಸಕಲ ಜಗತ್ತಿಗೂ ಆಧಾರ. ಆತ್ಮಗಳು ಆಧೇಯಗಳು. 'ಉತ್ತಮಃ ಪುರುಷಃ ಅನ್ಯಃ ಪರಮಾತ್ಮೇತಿ ಉದಾಹೃತಃ (ಗೀತೆ) 'ಜಗತ್ ಸರ್ವಂ ಶರೀರಂತೇ', 'ತತ್ಸರ್ವಂ ಹರೇಃ ತನುಃ' ಎಂಬಿವು ಆತ್ಮಪರಮಾತ್ಮ ಸಂಬಂಧ ದ್ಯೋತಕಗಳು. ಇದೇ ಶರೀರ ಶರೀರಿ ಭಾವ ಸಂಬಂಧ. ಧಾರ್ಯಧಾರಕ ಸಂಬಂಧ. ಚಿದ ಚಿತ್ ವಿಶಿಷ್ಟ ಬ್ರಹ್ಮತ್ವಂ.

೯) ಭೋಕ್ತಾ--ಭೋಗ್ಯ ಸಂಬಂಧ :-- 'ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ' ಎಂದು ಅವನು ಭೋಕ್ತಾ, ಆತ್ಮವರ್ಗಗಳು ಭೋಗ್ಯರು. 'ಅಹಮನ್ನಂ' ಎಂದು ಆತ್ಮ ಹೇಳಿದರೆ 'ಭಗವಂತ', 'ಅಹಮನ್ನಾದಃ' ಎನ್ನುತ್ತಾನೆ. ಬದ್ಧಾವಸ್ಥೆಯಿಂದ ಮುಕ್ತನಾಗಿ ಮೋಕ್ಷ ಹೊಂದಿದ ಆತ್ಮನಿಗೆ ಅವನು ಭೋಕ್ತಾ ಆಗಿದ್ದಾನೆ.

ಇವೆಲ್ಲಾ ಆತ್ಮನಿಗೆ ಒಬ್ಬನೇ ಪರಮಾತ್ಮನಲ್ಲಿರಬೇಕಾದ ಸಂಬಂಧಗಳು (ಒಬ್ಬಗಂಡ -- ಒಬ್ಬಹೆಂಡತಿ ಎಂಬಂತೆ) ದೇರೊಂದರಲ್ಲಿ ಪ್ರವೃತ್ತಿ ಇಲ್ಲದೇ ಅನನ್ಯಾರ್ಹವಾಗಿರಲೇಬೇಕು. ನಾವು ಸ್ವತಂತ್ರರೆಂದು ವರ್ತಿಸಿದರೆ ಅತಂತ್ರವಾಗಿ ಅನರ್ಥವೇ ಆಗುತ್ತದೆ ಎಂಬುದರಲ್ಲಿ ಸಂದೇಹವಿಲ್ಲ. ಒಬ್ಬನೇ ದೈವದಲ್ಲಿ ಆತ್ಮನಿಗಿರಬೇಕಾದ ಈ ಒಂಬತ್ತು ಸಂಬಂಧಗಳೂ ಅವ್ಯಭಿಚಾರದಿಂದಿರಬೇಕು. ಒಬ್ಬನಿಗೇ ಮೀಸಲಾಗಿರಬೇಕು. ಆಗ ಮೋಕ್ಷಪದವಿಗೆ ಅರ್ಹತೆ ಉಂಟಾಗುವುದು ಎಂಬುದು ಫಲಿತಾರ್ಥ.

ನವತಿರುಪತಿಗಳು : ನಮ್ಮಾಳ್ವಾರರು ಹುಟ್ಟಿದ ಊರಾದ ಆಳ್ವಾರ್ ತಿರುನಗರಿಯ ಸುತ್ತ ಒಂಬತ್ತು ದಿವ್ಯದೇಶಗಳಿವೆ. ವಿಶೇಷವೇನೆಂದರೆ ವೈಶಾಖ ಮಾಸದ ವಿಶಾಖಾನಕ್ಷತ್ರದಲ್ಲಿ ಈ ಎಲ್ಲಾ ಮೂರ್ತಿಗಳ ಗರುಡೋತ್ಸವ ಆಳ್ವಾರರ ಊರಲ್ಲಿ ಒಂದೇಸಲ ವಿಜೃಂಭಣೆಯಿಂದ ನಡೆಯುವುದು. ಆ ಒಂಬತ್ತು ತಿರುಪತಿಗಳು ಯಾವುವೆಂದರೆ---

೧) ತಿರುಕ್ಕುರುಗೂರ್, ೨) ತೊಲೈವಿಲ್ಲಿಮಂಗಲಂ, ೩) ವರಗುಣಮಂಗೈ, ೪) ತೆ‌ತಿರುಪ್ಪೇರೈ, ೫) ಶ್ರೀ ವೈಕುಂಠಂ, ೬) ತಿರುಪ್ಪುಳಿಂಗುಡಿ, ೭) ತಿರುಕ್ಕುಳಂದೈ, ೮) ತಿರುಕ್ಕುರುಂಗುಡಿ, ೯) ತಿರುಕ್ಕೋಳೂರ್.

ಇಷ್ಟೇ ಅಲ್ಲದೇ ಇನ್ನೂ ಅನೇಕ ವಿರಬಹುದು. ಬುದ್ಧಿವಾಕ್ಕಿಗೆಟುಗಿದಷ್ಟೂ ಇದೆ. ಬುದ್ಧಿಗೆಟುಕದಷ್ಟೂ ಇದೆ ಭಗವಂತನ ವೈಭವ. ಈ ಸಮಸ್ತ 'ಒಂಬತ್ತು' ಗಳೂ ಭಗವಂತನ ಅತಿ ವೈಭವದಲ್ಲೇ ಸೇರಿದೆ. ಅವನ ಸೃಷ್ಟಿ ಅತ್ಯದ್ಭುತ. ಅದನ್ನು ಹೇಳುವ ನಾಲಿಗೆ ನಮಗಿಲ್ಲ "ಯತೋವಾಚೋ ನಿರ್ವಂತೇ" ಮನಸ್ಸಿಗೂ ಎಟುಕದು ಅಪ್ರಾಪ್ಯಮನಸಾ ಸಹ.

-- ಓಂ ಶಾಂತಿಃ ಶಾಂತಿಃ ಶಾಂತಿಃ -- *

ಕನ್ನಡದ ಶಕ್ತಿ ಕವಿ ರನ್ನನಂತೆ ಈತನೂ ಸಹ ಕೃತ್ತಿಯಲ್ಲಿ ಬಳೆಗಾರ. ಈತ ವಿದ್ಯಾವಂತನಲ್ಲ - ಇಂದಿನ ಅರ್ಥದಲ್ಲಿ. ಆದರೆ ಅಧ್ಯಾತ್ಮ ವಿದ್ಯಾಪ್ರವೀಣ. ವಸ್ತುತಃ ವಿದ್ಯೆ ಎಂದರೆ ಅಧ್ಯಾತ್ಮ ವಿದ್ಯೆಯೇ ತಾನೆ!! ಈತನ ಹೆಸರು ನಾರಣಪ್ಪ. ಪದವಿ ಗಳಿಸದೊಂದಗ್ಗಳಿಕೆ -- ಎಂಬ ದೃಷ್ಟಿಯಲ್ಲಿ ಗದುಗಿನ ನಾರಣಪ್ಪನಿಗೂ -- ಕೈವಾರದ ನಾರಣಪ್ಪನಿಗೂ ತುಂಬ ಸಾಮ್ಯವಿದೆ. ಇಬ್ಬರೂ ಭಕ್ತಕವಿಗಳು -- ಪ್ರತಿಭಾಸಂಪನ್ನರು -- ಕಾವ್ಯಯೋಗಿಗಳು -- ದೈವಸಾಕ್ಷಾತ್ಕಾರ ಪಡೆದ ಪುಣ್ಯಜೀವಿಗಳು.

ಕೋಲಾರ ಜಿಲ್ಲೆಯ ಒಂದು ಗ್ರಾಮ ಕೈವಾರ. ಇದು ಮಹಾಭಾರತದ ಏಕಚಕ್ರನಗರವೆಂದು ಕೆಲವರ ನಂಬಿಕೆ. ಆ ಮಾತು ಬೇರೆ. ನಮ್ಮ ದೇಶದಲ್ಲಿ ಇಂತಹ ಭಾವುಕ ಕಲ್ಪನೆಗಳಿಗೂ ಭ್ರಾಮಕ ಕಲ್ಪನೆಗಳಿಗೂ ಇತಿಮಿತಿ ಇಲ್ಲ. ಆದರೆ ಈ ಗ್ರಾಮದ ಒಬ್ಬ ಸಾಮಾನ್ಯವ್ಯಕ್ತಿ ಅಸಾಧಾರಣವ್ಯಕ್ತಿಯಾಗಿ ಮೆರೆದಿದ್ದಾನೆ; ಅಮೂಲ್ಯ ಸಂಗೀತ ಕೃತಿಗಳನ್ನು ರಚಿಸಿದ್ದಾನೆ; ಜನ ಸಾಮಾನ್ಯರ ಭಾಷೆಯನ್ನು ಬಳಸಿಕೊಂಡಿದ್ದಾನೆ; ಇಂದಿಗೂ ಸಹಸ್ರ ಸಹಸ್ರಮಂದಿಯ ನಾಲಿಗೆಯ ಮೇಲೆ ಈ ಕವಿಯ ಕೃತಿಗಳು ನಕ್ಕುನಲಿದಾಡುತ್ತಿವೆ - ಎಂಬುದಂತೂ ಸತ್ಯ. ಈತ ಸುಮಾರು ೨೫೦-೩೦೦ ವರ್ಷಗಳ ಹಿಂದಿನವನು.

ಈತನ ಆರಾಧ್ಯದೇವತೆ ಕ್ಷೇತ್ರಾಧಿಪತಿಯೂ ಕ್ಷೇತ್ರಾಭಿಮಾನದೇವತೆಯೂ ಸರ್ವಶಕ್ತನೂ ಆದ ಅಮರನಾರಾಯಣ ಸ್ವಾಮಿ. ನಾರಣಪ್ಪ ವೀರವಿರಕ್ತ ಜೀವ. ಗೃಹಸ್ಥನಾಗಿದ್ದರೂ -- ಪದ್ಮಪತ್ರಮಿವಾಂಭಸಾ -- ಅಂಟಿಯೂ ಅಂಟದಂತೆ ಬಾಳಿದವನು. ಈ ನಿರ್ಲಿಪ್ತತೆ ಆತನ ಬಾಳಿಗೊಂದು ಮೆರುಗು ಕೊಟ್ಟಿದೆ. ಪ್ರತಿಭೆಗೆ ಸಾಣೆಹಿಡಿದಿದೆ. ಜೀವಕ್ಕೆ ಸಮಾಧಾನ ಕೊಟ್ಟಿದೆ. -- ಅಮೂಲ್ಯ ಕೀರ್ತನೆಗಳು ಹೊರಹೊಮ್ಮುವಂತೆ ಮಾಡಿದೆ. ಆತನ ಒಂದೊಂದು ಕೃತಿಯೂ ಗಂಭೀರಾರ್ಥ ಭೂಯಿಷ್ಠವಾಗಿದ್ದು -- ಅಮರನಾರಾಯಣನ ಶ್ರೀಪಾದಗಳಲ್ಲಿ ಸಮರ್ಪಿಸಿದ ಕುಸುಮರಾಜಿಯಾಗಿದೆ -- ಸುಮನ ಸಂಚಯವಾಗಿದೆ.

ಸಂಗೀತಗಾರರು ಈ ಕೀರ್ತನೆಗಳನ್ನು ಹಾಡಿ ಹಾಡಿ ಬಳಕೆಗೆ ತರುವ ಸೌಜನ್ಯ ತೋರಬೇಕಾಗಿದೆ. ಬಹುಶಃ ಇಂತಹ ಅನೇಕಜನ ವಾಗ್ಗೇಯಕಾರರು ಇರಬಹುದು. ಅವರ ರಚನೆಗಳು ಉತ್ತಮೋತ್ತಮವಾಗಿರಬಹುದು. ಆದರೆ ಸಂಗೀತ ಕಚೇರಿಗಳಲ್ಲಿ ಹಾಡಿದಲ್ಲದೆ -- ಅವು ಜನಪ್ರಿಯವಾಗಲಾರವು. ಕೈವಾರದ ಕವಿಯ ಕೆಲವು ಕೀರ್ತನೆಗಳನ್ನು ಪ್ರಸಿದ್ಧ ಗಾಯಕ ಶ್ರೀ ಬಾಲಮುರಳಿಕೃಷ್ಣರವರು ಹಾಡುವ ಕೃಪೆ ಮಾಡಿದ್ದಾರೆ. ಕೈವಾರದ ಕವಿಯ ಕೀರ್ತನೆಗಳನ್ನು -- ವೇದಾಂತಸಾರಾವಳಿ, ಶ್ರೀಕೃಷ್ಣ ತತ್ವಾಮೃತ, ನಾದ ಬ್ರಹ್ಮಾನಂದ ನಾರಾಯಣಶತಕ, ಭೀಮಲಿಂಗಶತಕ, .....ಹೀಗೆ ಅನೇಕ ಗುಂಪಾಗಿ ವಿಂಗಡಿಸಲಾಗಿದೆ. ಈತ ಬರೆದ ಕಾಲಜ್ಞಾನ ಜನಪ್ರಿಯವಾಗಿದೆ. ಈ ಕವಿ ನಾರಾಯಣ ಎನ್ನುವ ಕಡೆ ಎಲ್ಲ ನಾರೇಯಣ -- ಎಂದಿರುವುದಕ್ಕೆ ಗ್ರಾಮ್ಯಪ್ರಯೋಗವೆಂಬುದೇ ಕಾರಣವಾಗಿದ್ದಿರಬಹುದು. ಅನ್ನಮಾಚಾರ್ಯನ ಕೃತಿಗಳಲ್ಲಿ ವೈವಿಧ್ಯವಿರುವಂತೆ ಈತನ ಕೃತಿಗಳಲ್ಲೂ ಸಹ -- ಕೀರ್ತನೆ -- ಪದ -- ಯಾಲಪದ -- ಗದ್ಯ -- ದ್ವಿಪದ -- ಸೀಸಪದ್ಯ -- ಕಂದ .....ಇತ್ಯಾದಿ ವೈವಿಧ್ಯವಿದೆ. ದಾಸರ ಪದಗಳಿಗೆ ದೋಷವಿಲ್ಲ ಯಾವ ರಾಗದಲ್ಲಿ ಬೇಕಾದರೂ ಹಾಡಬಹುದು ಎಂಬಂತೆ ಈತನ ಕವಿತೆಗಳನ್ನೂ ಅಷ್ಟೆ; ಯಾವ ರಾಗದಲ್ಲಿ ಬೇಕಾದರೂ ಹೊಂದಿಸಿಕೊಂಡು ಹಾಡಬಹುದು. ಆದರೂ ಸಹ ಕವಿಯೇ ಕೆಲವು ರಾಗಗಳನ್ನು ಸೂಚಿಸಿರುವುದು ಗಮನಾರ್ಹ. ಈತನ ಅನೇಕ ಕವಿತೆಗಳಲ್ಲಿ ನಾಡೀಕ್ರಿಯೆ -- ಯೋಗಪ್ರಕ್ರಿಯೆಗಳ ವಿಶದವಿವರಣೆ -- ಕುಂಡಲಿನೀ ಉದ್ದೀಪನ -- ಅನಾಹತನಾದ -- ಪ್ರಧಾನ ವಸ್ತುವಾಗಿ ಕಾಣುತ್ತದೆ. ವೈರಾಗ್ಯವನ್ನು ಬೋಧಿಸುವ -- ಆತ್ಮ

# ಕೈವಾರದ ಕವಿ

ದಿ|| ವಿದ್ವಾನ್. ಬ. ನ. ಗುಂಡೂರಾವ್.

ಪ್ರಬೋಧ ವಾಕ್ಯಗಳು ಖೇಚರಿಮುದ್ರೆ -- ಹಟಯೋಗ -- ತ್ರಾಟಕ ಮುಂತಾದ ಅಂಶಗಳು ಕೆಲವು ಕವಿತೆಗಳಲ್ಲಿ ಪ್ರಕಟಗೊಂಡಿವೆ. ಸಾಂಕೇತಿಕವಾಗಿ ಕೆಲವು ಒಗಟುಗಳು ಸಹ ಅಲ್ಲಲ್ಲಿ ಬಂದಿವೆ. ಅಸ್ಮದ್ಗುರುಭ್ಯೋ ನಮಃ ಹಯಗ್ರೀವಾಯ ನಮಃ ಆದಿಕೇಶವಾಯ ನಮಃ -- ಎಂಬ ವಾಕ್ಯ ಅನೇಕ ಕಡೆ ಬಂದಿರುವುದನ್ನು ಗಮನಿಸಿ ಕೆಲವರು ಈತನ ಮೇಲೆ ವಿಶಿಷ್ಟಾದ್ವೈತದ ಪ್ರಭಾವ ಬಿದ್ದಿರಬಹುದೇ -- ಎಂದು ತರ್ಕಿಸುವುದುಂಟು. ವಸ್ತುತಃ ಈತ ದ್ವೈತಾದ್ವೈತ ವಿಶಿಷ್ಟಾದ್ವೈತ ಇತ್ಯಾದಿಗಳಿಂದ ದೂರವಿದ್ದಾನೆ -- ಅಥವ ಮೇಲೇರಿದ್ದಾನೆ -- ಸಮ್ಯಕ್‌ದೃಷ್ಟಿ ಪಡೆದಿದ್ದಾನೆ. ಸೌಧವೇರಿದವರಿಗೆ ನಭವ ಸೇರಿದವರಿಗೆ ಬೀದಿಬೆಳಕಿಂದೇನು -- ಮಂಕುತಿಮ್ಮ!!

ಕೈವಾರದ ಈ ಕವಿಯ ಮೇಲೆ ಪುರಂದರದಾಸ, ಭದ್ರಾಚಲರಾಮದಾಸ -- ಅನ್ನಮಾಚಾರ್ಯ .....ಮುಂತಾದವರ ಪ್ರಭಾವ ಬಿದ್ದಿದೆ ಎಂಬುದಕ್ಕೆ ಆತನ ಕೀರ್ತನೆಗಳಲ್ಲೇ ಆಧಾರ ಸಿಕ್ಕುತ್ತದೆ. ಹೀಗೆ ಪ್ರಭಾವಿತನಾಗುವುದು ಅಸಹಜವೇನಲ್ಲ. ತ್ಯಾಗರಾಜಸ್ವಾಮಿಯವರು ಬರೆದಿರುವ -- ಪ್ರಹ್ಲಾದ ಭಕ್ತ ವಿಜಯ -- ಎಂಬ ಗೀತನಾಟಕದಿಂದ ಪ್ರಭಾವಿತನಾಗಿ ಈ ಕವಿ ಶ್ರೀಕೃಷ್ಣ ಚರಿತ ತತ್ವಾಮೃತ ಯೋಗ ಪ್ರಬಂಧ -- ಎಂಬ ಸುಂದರ ಗೀತನಾಟಕ ರಚಿಸಿದ್ದಾನೆ. ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಾದ ಭಕ್ತಿ -- ಸಮಾಜ ಸುಧಾರಣೆ ಈತನ ರಚನೆಗಳಲ್ಲಿ ಹೇರಳವಾಗಿದೆ.

ಕಾಲಜ್ಞಾನ -- ಭವಿಷ್ಯಕಥನ -- ಭಾಗವತೇತ್ಯಾದಿ ಅನೇಕ ಗ್ರಂಥಗಳಲ್ಲಿದೆ. ವೀರಬ್ರಹ್ಮೇಂದ್ರಯೋಗಿಯ ಕಾಲಜ್ಞಾನ -- ಕೈವಾರದ ಕವಿಯ ಕಾಲಜ್ಞಾನ .....ಹೀಗೆ ಅನೇಕರು ತಮ್ಮ ದಿವ್ಯದೃಷ್ಟಿಯಿಂದ ಜಗತ್ತಿನ ಭವಿಷ್ಯವನ್ನು ಕುರಿತು ನುಡಿದಿದ್ದಾರೆ. ಈ ಕಾಲಜ್ಞಾನ ಲೇಖನದಲ್ಲಿ ಕೆಲವು ಪಾಶ್ಚಿಮಾತ್ಯ ಲೇಖಕರೂ ಇದ್ದಾರೆಂಬುದು ಗಮನಾರ್ಹ ಸಂಗತಿ. ಈ ಭವಿಷ್ಯದ್ದರ್ಶಿಗಳು ಹೇಳಿದ ಅನೇಕ ವಿಚಾರಗಳು ಸತ್ಯವೆಂದು ಸಾಬೀತಾಗಿವೆ -- ಎಂಬುದು ಜಗತ್ತಿನ ಅನುಭವದಲ್ಲಿದೆ. ಸಾಂಕೇತಿಕವಾಗಿ ವೇದಾಂತ ಬೋಧಿಸುವಲ್ಲಿ ಕೈವಾರದ ಈ ಕವಿ ನಾರಣಪ್ಪನಿಗೂ ಸಂತಶಿಶುನಾಳಪರೀಫನಿಗೂ ತುಂಬ ಸಾಮ್ಯವಿದೆ.

ವಾಕ್ಯಂ ರಸಾತ್ಮಕಂ ಕಾವ್ಯಂ -- ಎಂಬ ಸಿದ್ಧಾಂತವಿದೆ. ಕಾವ್ಯರಚನೆಯಲ್ಲಿ ಪ್ರಾಧಾನ್ಯ ಅಲಂಕಾರಕ್ಕೋ -- ರಸಕ್ಕೋ -- ಎಂಬ ಚರ್ಚೆಗೆ ಉತ್ತರವಾಗಿ ಈ ಸಿದ್ಧಾಂತ ಬಳಕೆಗೆ ಬಂದಿರಬಹುದು. ಕವಿತೆಯಲ್ಲಿ ಧರ್ಮ -- ಲೋಕಶಿಕ್ಷಣ -- ಭಕ್ತಿ -- ಜ್ಞಾನ -- ವೈರಾಗ್ಯ ಎಲ್ಲವನ್ನೂ ಹಿತಮಿತವಾಗಿ ಬಳಸಿಕೊಳ್ಳುವ ಕಲೆ, ಕೈವಾರದ ಕವಿಗೆ ಕರಗತವಾಗಿದೆ. ಪ್ರತಿಭೆ -- ದೈವಕೃಪೆ -- ಲೋಕಾನುಕಂಪ -- ಧರ್ಮಾನುರಾಗ -- ಶುದ್ಧಜೀವನ -- ವಿಶ್ವಾಂತರ್ಯಾಮಿ ಚೈತನ್ಯದ ಬಗ್ಗೆ ಶ್ರದ್ಧಾಭಕ್ತಿ..... ಇವು ಯಾರ ಬಾಳಿನಲ್ಲಿ ಮೂಲಸಾಮಗ್ರಿಯಾಗಿದೆ -- ಅಂತಹ ಸಿದ್ಧಪುರುಷರು ನುಡಿದುದೆಲ್ಲ ಕವಿತೆ -- ಬರೆದುದೆಲ್ಲ ಕಾವ್ಯ -- ಹಾಡಿದುದೆಲ್ಲ ರಸಮಯ ಸಂಗೀತವಾಗಿರುತ್ತದೆ.

ಜಗನ್ಮಾತೆ -- ಆದ್ಯಾಶಕ್ತಿ -- ಭವತಾರಿಣಿಯನ್ನು ಕುರಿತು ಈ ಕವಿಪುಂಗವ ಅನೇಕ ಕೀರ್ತನೆಗಳನ್ನು ರಚಿಸಿದ್ದಾನೆ; ಸಂಗೀತಕ್ಕಾಗಿಯೇ ಹೇಳಿಮಾಡಿಸಿದ ಭಾಷೆಯಾದ ತೆಲುಗಿನಲ್ಲಿ--

ಅಂಬನು ಚೂಡರಮ್ಮ  
ಮನ ಜಗದಂಬನು ಚೂಡರಮ್ಮ || ಪ ||

ಅಂಬನು ಚೂಡರೆ - ಅಖಿಲಾಂಡೇಶ್ವರಿ  
ಶಂಭುನಿ ಸತಿ ತಾ ಕೊಲುವೈಯುನ್ನದಿ

ಪಂಜುಲು ಕಮ್ಮಲು ಪಾಪಟಬೊಟ್ಟುನು
ಥಳುಕು ಬುಗಡುಲು ತಾಳಿಪದಕಮು
ಚಕ್ಕನಿ ತಲ್ಲಿಕಿ ಮುತ್ಯಪು ಮುಕ್ಕರ
ಪರಮೇಶ್ವರುಸತಿ ಕೊಲುವೈಯುನ್ನದಿ

ಕವಿ ತನ್ನ ಆರಾಧ್ಯದೇವಮೂರ್ತಿ ಅಮರನಾರಾಯಣನಿಗೆ ದಿಟ್ಟವಾಗಿ ಧೈರ್ಯವಾಗಿ ಹೇಳುತ್ತಾನೆ -- ಆ ಕಾಲದಲ್ಲಿ ರಾವಣಕುಂಭಕರ್ಣಾದಿಗಳನ್ನು ಕೊಂದು ಕೆಡಹಿದ ನಿನ್ನ ಭುಜಬಲ ಪರಾಕ್ರಮಕ್ಕೆ ನಾನು ಹೆದರುವವನಲ್ಲ. ಅವೆಲ್ಲ ನನ್ನಲ್ಲಿ ಸಾಗದು. ಮತ್ಸ್ಯಾವತಾರದಲ್ಲಿ ನೀರಿನಲ್ಲಿ ಮುಳುಗಿರಬಹುದು. ಆದರೇನು ಜ್ಞಾನಭಕ್ತಿ ಎಂಬ ಗಾಳ ಹಾಕಿ ನಿನ್ನನ್ನು ಕ್ಷಣಕಾಲದಲ್ಲಿ ಹಿಡಿಯುತ್ತೇನೆ. ನನ್ನ ಭಕ್ತಿಯ ಹಿಡಿತಕ್ಕೆ ಸಿಕ್ಕಿದ ಮೇಲಾಯ್ತು -- ನೀನೆಲ್ಲಿ ತಪ್ಪಿಸಿಕೊಂಡು ಹೋಗಲು ಸಾಧ್ಯ?

ಇಕ ಎಂದು ಪೊಯ್ಯೇವು |
ವಿಡುವನು ನೀ ಯಾನ
ಪಗಲು ರೇಯಿ ಪಟ್ಟು
ವದಲಕ ಯುನ್ನಾನು ||

ಸ್ತ್ರೀ -- ಪುರುಷ ಎಂದು ಕೇವಲ ಎರಡು ಜಾತಿ -- ಗುಂಪು ಇದೆ. ಉಳಿದ ಜಾತಿಗಳೆಲ್ಲ ಕಾರಣಾಂತರದಿಂದ ಮಾನವ ತಯಾರಿಸಿದ ವ್ಯವಸ್ಥೆ -- ಇದಕ್ಕೆ ಹೆಚ್ಚುಮಹತ್ವ ಕೊಡುವುದು ಅವಿವೇಕ -- ಎನ್ನುತ್ತಾನೆ ಈ ಸಿದ್ಧಪುರುಷ. ಪ್ರಿಯ ದರ್ಶನಾಕಾಂಕ್ಷೆಯಿಂದ ಪರಿತಪಿಸುವ ವಿರಹಿಯಂತೆ ಭಕ್ತಜೀವ ಭಗವಂತನ ದರ್ಶನಕ್ಕೆ ಹಾತೊರೆಯುತ್ತಿದೆ. ಆತನಿಗೆ ದಯಬರದೇಕಲ್ಲ -- ಆಗತಾನೆ ಭಾಗ್ಯ!! ಈ ಅರ್ಥಕೊಡುವ ಅನೇಕ ಮಧುರ ಕವಿತೆಗಳನ್ನು ರಚಿಸಿದ ಈ ಕವಿಗೆ ಸಂಸ್ಕೃತದ ಪಾಂಡಿತ್ಯ -- ಪುರಾಣ ಕಥೆಗಳ ಪರಿಚಯ ತುಂಬ ಚೆನ್ನಾಗಿದ್ದಿರಬೇಕು. ಕೃಷ್ಣನ ಚೇಷ್ಟೆಗಳನ್ನು ತಾಳಲಾರದೆ ಗೋಪಿಯರು -- ಯಶೋದೆಗೆ ದೂರು ಹೇಳುವುದು -- ದೇಸರವಾಗಿ -- ಊರು ಬಿಟ್ಟು ಎಲ್ಲಾದರೂ ಹೋಗಿ ಹೇಗೋ ಬಾಳುತ್ತೇವೆ ಎನ್ನುವುದು -- ಈತನ ಕೆಲವು ಕವಿತೆಗಳ ವಸ್ತು.

ಎಂದುಂಡಿ ವಸ್ತಿವಿ ತುಮ್ಮೆದಾ
ಏ ಊರು ನೀ ಊರು ತುಮ್ಮೆದಾ
ಆರುಗುರು ಇದ್ದರು ತುಮ್ಮೆದಾ
(6+2=ಅಷ್ಟಮದಗಳು)
ವಾರುಲಧಿಕ ಬಲಾಢ್ಯುಲು ತುಮ್ಮೆದಾ
ವಾರು ಪ್ರಜ್ಞನು ಚೆಡಿಪೇರು ತುಮ್ಮೆದಾ
ಸುಜ್ಞಾನಿವೈಯುಂಡು ತುಮ್ಮೆದಾ

ಇಂತಹ ಬೋಧಪ್ರದ ಸುಂದರ ಗೀತೆಗಳು ನೂರಾರು ರಚಿಸಿದ್ದಾನೆ ಈ ಕವಿ.

ಚಕ್ಕನಿಸಾಮಿ -- ಚಿಕ್ಕಕ ಇನ್ನಾಳ್ಳು
ತಪ್ಪಿಂಚುಕೊನಿ ಉನ್ನಾ - ತಾವು ತೆಲಿಸೆನು

ಕನ್ನಡದಲ್ಲೂ ಕೆಲವು ಪದ್ಯಗಳನ್ನು ಈ ಕವಿ ರಚಿಸಿದ್ದಾನೆ--

ಆಲಸ್ಯವೇತಕೋ - ಪಾಲಿಸೆನ್ನ ಹರಿಯೆ
ನಿಮ್ಮದಾಸಾನುದಾಸರಿಗೆ
ದಾಸನು ನಾನಯ್ಯಾ ||೧||

* * * * *

ಬಾರಯ್ಯಾ ಗೋವಿಂದ-
ಬಂಧನವ ಬಿಡಿಸೊ
ದೇಹವೆಂಬ ಬಂಡಿ-ಎಳೆದು ಬಳಲಿದೆನೋ

* * * * *

ಮರೆಯಲಾರೆನಮ್ಮ- ರಂಗನ
ಮರೆಯಲಾರೆನೇ ಮಾಗಡಿ ರಂಗನ
ಬೇಡಿದವರಗಳ ಕೊಡುವ ಮಹಾತ್ಮನ

ಇತ್ಯಾದಿ ಅನೇಕ ಪದ್ಯಗಳನ್ನು ಉದಾಹರಿಸಬಹುದು.

ಯಾಲಪದ ಕೋಲಾರ ಜಿಲ್ಲೆಯ ಗ್ರಾಮಾಂತರ ಪ್ರದೇಶಗಳ ಜನಪದ ಸಾಹಿತ್ಯದ ಒಂದು ವಿಶಿಷ್ಟ ರೀತಿ. ನಾರಣಪ್ಪ, ಕೃಷ್ಣ - ಗೋಪಕನ್ಯೆ - ಇವರ ಸರಸಮಧುರ ರಸಿಕ ಸಂಭಾಷಣೆಯನ್ನು - ಯಾಲಪದವಾಗಿ ಆ ಧಾಟಿಯಲ್ಲಿ ರಚಿಸಿದ್ದಾನೆ.

ಅಜಭವಾರ್ಚಿತ ಆದಿಕೇಶವ
ಅಂಬುಜೋದರ ಮಾಧವಾ
ಸಜ್ಜನ ಪ್ರಿಯ ಸರಸಿಜೋದ್ಭವ
ಶ್ರೀನಿವಾಸ ದಯಾನಿಧೇ || ಶರಣು ಶರಣು ||

ಶರಣು ಶ್ರೀಹರಿ ಭಕ್ತಪಾಲನ
ಶರಣುಮುಜ್ಜಗ ಪಾಲನಾ
ಶರಣು ನರಸಖ ಶ್ರೀ ಜನಾರ್ದನ
ಶರಣು ಶ್ರೀದಾಮೋದರಾ || ಶರಣು ||

ಜಯನಮೋ ರಿಪುರಾವಣಾಂತಕ
ಜಯನಮೋ ಸರ್ವಾತ್ಮಕಾ
ಜಯನಮೋ ಶರಣಾರ್ತ ರಕ್ಷಕ
ಜಯನಮೋ ಶ್ರೀರಾಘವಾ || ಶರಣು ||

ಇಂತಹ ಅನೇಕ ಸುಂದರ ರಚನೆಗಳನ್ನು ಹಾಡಿದ ಈ ಭಕ್ತಕವಿ ತಿರುಪತಿ ಶ್ರೀನಿವಾಸನನ್ನು ಸಂದರ್ಶಿಸಿದ್ದಾನೆ -- ದಿವ್ಯಾನಂದವನ್ನು ಅನುಭವಿಸಿದ್ದಾನೆ. ಆ ಮಧುರಾನಂದಾನುಭೂತಿ -- ಈ ಕವಿತೆಯಾಗಿ ಪ್ರವಹಿಸಿದೆ--

ಚೂಡಗಂಟಿ ಸ್ವಾಮಿನಿ ವೇಡುಕೊಂಟಿ ||

ಗಾಲಿಗೋಪುರಮೆಕ್ಕಿ ಜೂಚಿತೆ
ಘಂಟನಾದಮು ಭೇರಿ ಶಬ್ದಮು
ಮೃದಂಗವಾದ್ಯಮು ವೇಣುನಾದಮು
ಕನಕ ಪಲುಕುಲು ಗಿಡಿಬಿಡಂಬುಲು
ಪೆದ್ದ ಬೂರುಗ ತಮ್ಮಟಂಬುಲು
ಪಾಂಚಜನ್ಯಮು ಬರ್ಬರಿಂಚುಚು
ಓಂ ನಮೋ ಅನು ವೇದ ಘೋಷಮು
ಮೇಘನಾದಮುತೋನ ವಿನಬಡೆ ||

ಮಕರ ಕುಂಡಲ ಭೂಷಣಂಬುಲು
ಮಣುಲಹಾರಮು ಮೇಟಿ ಪದಕಮು
ಎಂದು ಚೂಸಿನ ದೀಟುಲೇನಿದಿ
ಪಸಿಡಿಶಾಲುವ ಪಟ್ಟು ಧೋತಿ
ನುದಟಿ ಕಸ್ತೂರಿ
ಪಟ್ಟಿತಿರುಪಾಣಿ ಪೂತಗಂಧಮು
ಪೂಲಸರಮುಲು
ಉರಮುನನು ಅಲಮೇಲಮಂಗನು
ಅಂದಮುಗ ನಿಡುಕೊನ್ನ ದೇವುನಿ
- ಜೂಡಗಂಟಿ ||

ಹೀಗೆ ಸುದೀರ್ಘವಾಗಿ ಪ್ರವಹಿಸಿದೆ ಕೈವಾರದ ಕವಿ ಪ್ರತಿಭೆ.

*

# ತಿರುಮಾಲಿರುಂ ಶೋಲೈ

---ಎಂ. ಆರ್. ನರಸಿಂಹನ್.

**ನಾಲಾಯಿರ ದಿವ್ಯ ಪ್ರಬಂಧಗಳಲ್ಲಿ** ಎರಡು ಮಲೆಗಳಿಗೆ ಮಾತ್ರ ವಿಶಿಷ್ಟಸ್ಥಾನವಿರುವುದನ್ನು ನಾವು ಕಾಣಬಹುದು. ಒಂದು ತಿರುವೇಂಗಡ; ಮತ್ತೊಂದು ತಿರುಮಾಲಿರುಂ ಶೋಲೈ. ಬಡಗು ದಿಕ್ಕಿನ ತಿರುಮಲೆಯನ್ನು ವಡತಿರುವೇಂಗಡಂ ಎಂಬುದಾಗಿಯೂ ತೆಂಕಲಿಗಿರುವ ಬೆಟ್ಟವನ್ನು ತೆನ್ ತಿರುಮಾಲಿರುಂ ಶೋಲೈ ಎಂಬುದಾಗಿಯೂ ಆಳ್ವಾರ್‌ಗಳು ನಿರ್ದೇಶಿಸಿದ್ದಾರೆ. ಇವೆರಡೂ ಬಹು ಪ್ರಾಚೀನಕಾಲದಿಂದಲೇ ಶ್ರೀ ವೈಷ್ಣವರಲ್ಲಿ ಮಾತ್ರವೇ ಅಲ್ಲದೆ ತಮಿಳುಸಾಹಿತ್ಯದಲ್ಲೇ ಖ್ಯಾತಿಯನ್ನು ಹೊಂದಿರುವ ಬೆಟ್ಟಗಳು.

ಆಳ್ವಾರುಗಳಲ್ಲಿ ಪ್ರಥಮರೆನಿಸಿದ ಮೊದಲಾಳ್ವಾರ್ ಮೂವರಲ್ಲಿ ಎರಡನೆಯವರಾದ ಪೂದತ್ತಾಳ್ವಾರ್ ತಮ್ಮ ಇರಂಡಾಂತಿರುವಂದಾದಿಯ ೫೪ ನೇ ಪಾಶುರದಲ್ಲಿ ಮೊದಲಿಗೆ ಇದರ ಪ್ರಸ್ತಾಪಮಾಡಿದ್ದಾರೆ.

ವಿಸ್ತಾರವಾದ ತಿರುಮಾಲಿರುಂಶೋಲೈ ಮತ್ತು ತಿರುವೇಂಗಡ ಎಂಬ ಎರಡು ಬೆಟ್ಟಗಳನ್ನು ನೀನು ಪ್ರೀತಿಯಿಂದ ವಾಸಸ್ಥಾನಗಳೆಂದು ಆರಿಸಿಕೊಂಡಿರುವಾಗ ಒಂದು ವೇಳೆ ನನ್ನ ಹೃದಯದಲ್ಲಿ ನೆಲೆಸಬೇಕೆಂಬ ಇಚ್ಛೆಯುಂಟಾದಲ್ಲಿ ಮೇಲೆ ತಿಳಿಸಿದ ಎರಡು ಸ್ಥಾನಗಳನ್ನೂ ತತ್ಪೂರ್ವವಾದ ನಿನ್ನ ವಾಸಸ್ಥಳ ಕ್ಷೀರಾಬ್ಧಿಯನ್ನೂ ಖಂಡಿತ ತೊರೆದುಬಿಡಬೇಡ ಎಂದು ಆಳ್ವಾರ್ ಬೇಡಿಕೊಳ್ಳುತ್ತಾರೆ.

ಇಲ್ಲಿ ನಾವು ಕಾಣುವುದು ಪರಮಾತ್ಮನು ಕ್ಷೀರಾಬ್ಧಿಯನ್ನೂ ಸಹ ತೊರೆದು ತಿರುಮಲೆ, ತಿರುಮಾಲಿರುಂ ಶೋಲೈ ಮಲೆಗಳನ್ನು ಆವಾಸಸ್ಥಾನ ಮಾಡಿಕೊಂಡು, ಆಶಿಸಿ ವಾಸಿಸುತ್ತಿರುವುದು. ಈ ದೃಷ್ಟಿಯಿಂದ ಶ್ರೀ ವೈಷ್ಣವನಿಗೆ ಇವು ಪರಮಪದಕ್ಕಿಂತ ಶ್ರೇಷ್ಠವಾದ ತಾಣಗಳು ಎಂದರೆ ಅತಿಶಯೋಕ್ತಿ ಆಗಲಾರದು. ತಿರುವೇಂಗಡವನ್ನು ಶೋಲೈಮಲೈ ಎಂದು ಆಳ್ವಾರುಗಳು ಪ್ರತ್ಯೇಕವಾಗಿ ಕೀರ್ತಿಸಿದರು. ಶೋಲೈಮಲೈ ಎಂದರೆ ಉದ್ಯಾನಗಳಿಂದ ತುಂಬಿದ ಬೆಟ್ಟ. ಆದರೆ ತಿರುಮಾಲಿರುಂಶೋಲೈಗಲ್ಲಿ ಹೆಸರಿನಲ್ಲೇ ಈ ಸೊಬಗು ಅಡಕಗೊಂಡಿದೆ. ತಿರುಮಾಲ್ ಎಂದರೆ ಶ್ರಿಯಃಪತಿಯಾದ ಪರಮಾತ್ಮನು ಇರುಂ - ಇರತಕ್ಕ ಶೋಲೈ - ಉದ್ಯಾನ ಎಂದು ಅರ್ಥ. ಶ್ರಿಯಃಪತಿಯ ಇರುವಿಕೆಯಿಂದ ಶೋಲೈ ಆಯಿತೋ ಇಲ್ಲ ಈ ಶೋಲೈಗೆ ಮರುಳಾಗಿ ಶ್ರಿಯಃಪತಿ ಇಲ್ಲಿ ನೆಲೆಸಿದನೋ ಎಂಬುವುದು ನಾವು ಊಹಿಸಿಕೊಳ್ಳಬೇಕಾದ ಅಂಶ. 'ಶ್ರೀ ವೈಕುಂಠ ವಿರಕ್ತಾಯ ಸ್ವಾಮಿ ಪುಷ್ಕರಿಣೀತಟೇ ರಮಯಾರಮಮಾಣಾಯ ವೇಂಕಟೇಶಾಯ ಮಂಗಳಂ' ಎಂದಾಗ ನಿತ್ಯವೂ ಸುತ್ತ ಕಡಲಿನ ಒಂದೇ ಕ್ಷೀರ ರಾಶಿಯನ್ನು ಬಹಳ ಕಾಲದಿಂದ ನೋಡಿ ನೋಡಿ ವೈರಾಗ್ಯ ಹೊಂದಿ ಹೊಸದಾದ ರಮ್ಯ ತಾಣವನ್ನು ವಿಹಾರಯೋಗ್ಯವಾದುದನ್ನು ಅರಸುತ್ತಾ ತಿರುಮಲೆಯ ಸೌಂದರ್ಯದಿಂದ ಆಸಕ್ತನಾಗಿ ಸ್ವಾಮಿಪುಷ್ಕರಿಣಿಯ ತಟದಲ್ಲಿ ವಿಹಾರಕ್ಕೈಕೊಳ್ಳುವ ಇಚ್ಛೆಯಿಂದ ಶ್ರೀನಿವಾಸನು ಬಂದಿರುವುದನ್ನು ಕಂಡಾಗ ಈ ಶೋಲೈಯಿಂದ ಕಂಗೊಳಿಸುವ ಮಾಲಿರುಂಶೋಲೈ ಮಲೆಯೂ ಅವನನ್ನು ಅದೇ ರೀತಿ ಆಕರ್ಷಿಸಿರಬಹುದಾದ ಭಾವನೆ ಮೂಡುತ್ತದೆಯಲ್ಲವೆ. 'ತಿರುಮಾಲಿರುಂಶೋಲೈ'ಗೆ ಇನ್ನೊಂದು ಸ್ವಾರಸ್ಯ ಇದೆ. ತಿರುಮಾಲ್ ಎಂದರೆ ದೇವರು ಇರುಂ -- ಇರಲು ಯೋಗ್ಯವಾದ, ಇರಲು ಹೊಂದುವಂತಹ, ತಕ್ಕ ಶೋಲೈ -- ಉದ್ಯಾನವನ ಎಂದಾಗ ಇದರ ಹಿರಿಮೆ ಇನ್ನಷ್ಟು ಹಿರಿದಾಗುತ್ತದೆ. ದೇವನನ್ನು ಉಳಿಸಿಕೊಳ್ಳುವಂತಹ ಜಾಗ ನಿಜಕ್ಕೂ ಎಷ್ಟೊಂದು ಪುಣ್ಯಮಯ ದಿವ್ಯಧಾಮ. ಮಹತ್ವದಿಂದ ಕೂಡಿದ್ದು. ಈ ಎಲ್ಲ ಭಾವನೆಗಳಿಂದಲೂ ವಿಮರ್ಶೆ ಮಾಡಿದಾಗ ತಿರುಮಾಲಿರುಂ ಶೋಲೈನ ಉನ್ನತಿಯ ಅರಿವುಂಟಾಗದಿರದು. ಪ್ರಪನ್ನಜನ ಕೂಟಸ್ಥರೆಂದು ಹೆಸರಾದವರೂ ಮಹಾ ವೈರಾಗ್ಯ ಸಂಪನ್ನರೂ ಆದ ನಮ್ಮಾಳ್ವಾರ್ ಅವರೇ ಮರುಳಾಗಿ ಹಾಡಿರುವುದು--

ತಿಳರೊಳಿ ಇಳಿಮೈ ಕೊಡುವುದನ್‌ಮುನ್ನಂ
ವಳ ರೊಳಿ ಮಾಯೋನ್
ಮರುವಿಯ ಕೋಯಿಲ್
ವಳರಿಳಮ್ ಪೊಳಿಲ್
ಶೂಯ್ ಮಾಲಿರುಂ ಶೋಲೈ
ತಳರ್ವಿಲರಾಹಿಲ್ ಶಾರ್ವದು ಚದಿರೇ

--ಎಂಬುದಾಗಿ. ಯೌವನವು ಜಾರುವ ಮುನ್ನ ಮೈಯಲ್ಲಿ ಕಸುವಿರುವಾಗಲೇ ಗುಣೋತ್ಕರ್ಷ ಕಾಂತಿಯುತನಾದ ಶ್ರಿಯಃಪತಿಯ ನೆಲೆಯಾದ ದಿವ್ಯೋದ್ಯಾನ ಭರಿತವಾದ ಮಾಲಿರುಂಶೋಲೈ ಮಲೆಯನ್ನು ಕಂಡು ಆನಂದಪಟ್ಟು ಆಶ್ರಯಿಸುವುದು ಎಷ್ಟೊಂದು ಜಾಣು, ಉಪಾಯ ಎಂಬುವುದು ಇದರ ಅರ್ಥ. ಇದರಲ್ಲಿ ಮಾಲಿರುಂಶೋಲೈ ವೈಭವವೆಲ್ಲ ಸೂತ್ರರೂಪವಾಗಿ ಅಡಕಗೊಂಡಿದೆ.

ಆಳ್ವಾರ್‌ಗಳಲ್ಲಿ ಕಡೆಯವರಾದ ತಿರುಮಂಗೈ ಅವರು ತಮ್ಮ 'ಪೆರಿಯ ತಿರುಮಡಲ್'ನಲ್ಲಿ "ತೆನ್ನನುಯರ್ ಪೊರುಪ್ಪುಂ, ತೆಯ್ವವಡಮಲೆಯುಂ ಎನ್ನುಮಿವೈಯೇ ಮುಲೈಯಾ ವಡಿವಮೈಂದ" --ತೆಂಕಲಿನ ದೊಡ್ಡ ಮಲೆಯೂ, ದೈವದ ಬಡಗು ಮಲೆಯೂ ಎಂಬುವು ಸ್ತನಯುಗದಂತೆ ಕಂಗೊಳಿಸುತ್ತವೆ ಎಂಬ ಅರ್ಥ. ಇದರಲ್ಲಿ ಎರಡು ಮಲೆಗಳ ಹಿರಿಮೆಯೂ ಸಮಾನ ಪಾವಿತ್ರವೂ ಸ್ವಯಂ ವ್ಯಕ್ತಗೊಳ್ಳುತ್ತವೆ.

ಆಚಾರ್ಯ ಶ್ರೇಷ್ಠ ಕೂರತ್ತಾಳ್ವಾನ್ ಅವರು ತಮ್ಮ 'ಸುಂದರ ಬಾಹುಸ್ತವ'ದ ೧೧೭ ನೇ ಶ್ಲೋಕದಲ್ಲಿ ಈ ಎರಡು ಮಲೆಗಳ ದೈವಗಳ ಸಮಾನಮ ಹಿರಿಮೆಯನ್ನು ಈ ರೀತಿ ವರ್ಣಿಸುತ್ತಾರೆ.

ತ್ವಂ ಹಿ ಸುಂದರ ವನಾದ್ರಿ ನಾಥ ಹೇ !
ವೇಂಕಟಾಹ್ವಯ ನಗೇಂದ್ರ ಮೂರ್ಧನಿ
ದೇವಸೇವಿತ ಪದಾಂಬುಜದ್ವಯಃ
ಸಂಶ್ರಿತೇಭ್ಯ ಇಹ ತಿಷ್ಠಸೇ ಸದಾ!

ಎಲೈ ವನಾದ್ರಿನಾಥನಾದ ಸುಂದರ ಬಾಹುವೇ! ನೀನು ವೇಂಕಟಾದ್ರಿ ಎಂಬ ಬೆಟ್ಟದ ಮೇಲೆ ದೇವ

**ತಮಿಳುನಾಡಿನ ಮಧುರೆಯ ಸಮೀಪದಲ್ಲಿದೆ ತಿರುಮಾಲಿರುಂಶೋಲೈ ಅಳಗರ್ ತಿರುಮಲೈ ಎಂದು ಪ್ರಸಿದ್ಧವಾಗಿರುವ ಇಲ್ಲಿನ ಬೆಟ್ಟದ ತಪ್ಪಲಿನ ದೇವಾಲಯದಲ್ಲಿ ಸುಂದರಬಾಹುಸ್ವಾಮಿಯಿದ್ದು ಆಳ್ವಾರುಗಳು ಮಂಗಳಾಶಾಸನ ಮಾಡಿದ ಸ್ಥಳವಾಗಿ ನೂರೆಂಟು ತಿರುಪತಿಗಳಲ್ಲಿ ಇದೂ ಒಂದು. ಇದರ ವೈಭವ ವಿವರ ಇಲ್ಲಿದೆ.**

ತೆಗಳಿಂದ ಸೇವಿಸಲ್ಪಟ್ಟ ಪಾದಪದ್ಮಗಳನ್ನು ಉಳ್ಳವನಾಗಿ ಈ ಸ್ಥಳದಲ್ಲಿ ಆಶ್ರಿತರ ಅಭೀಷ್ಟಗಳನ್ನು ಪ್ರದಾನ ಮಾಡುವುದು ನನ್ನ ಉದ್ದೇಶವೆಂಬುದಾಗಿ ಸ್ವಾಭಿಪ್ರಾಯ ವ್ಯಕ್ತಪಡಿಸುತ್ತಾ ನಿಂತಿರುವೆಯಾ?

ಈ ರೀತಿ ಹಿರಿಯರು ಸುಂದರಬಾಹುವಿನಲ್ಲಿ ಶ್ರೀನಿವಾಸನನ್ನೂ, ಶ್ರೀನಿವಾಸನಲ್ಲಿ ಸುಂದರಬಾಹುವನ್ನೂ, ತಿರುವೇಂಗಡದಲ್ಲಿ ತಿರುಮಾಲಿರುಂ ಶೋಲೈ ಮಲೆಯನ್ನೂ, ತಿರುಮಾಲಿರುಂ ಶೋಲೈಯಲ್ಲಿ ತಿರುವೇಂಗಡವನ್ನೂ ದರ್ಶಿಸಿ ಆನಂದಿಸಿದ್ದಾರೆ. ಈ ಮಲೆಗಳ ಸಮಾನತ್ವವನ್ನು ಪ್ರಕಾಶಪಡಿಸಲು ಈ ನಿದರ್ಶನ ಸಾಕು.

ಇದು ಮಾತ್ರವಲ್ಲದೆ ಕೂರತ್ತಾಳ್ವಾನ್ ಅವರು ಮತ್ತೆ ಸುಂದರಬಾಹುಸ್ತವದ ಹತ್ತನೇ ಶ್ಲೋಕದಲ್ಲಿ 'ವೃಷಗಿರಿರಯಂ' ಎಂಬುದಾಗಿಯೂ ಅರವತ್ತನೇ ಶ್ಲೋಕದಲ್ಲಿ 'ಚಂದನ ವಿಲಸತ್ಕಂದರ ವೃಷಭ ಪತೇ' ಎಂದು ವೃಷಗಿರಿ, ವೃಷಭಾದ್ರಿ ಎಂದು ತಿರುಮಾಲಿರುಂಶೋಲೈಯನ್ನು ಸಂಬೋಧಿಸಿ ತಿರುವೇಂಗಡದ ಹೆಸರುಗಳನ್ನು ಈ ಗಿರಿಗೂ ಅನ್ವಯಗೊಳಿಸಿರುವುದು ಈ ಮಲೆಗಳ ಸಮಾನತ್ವವನ್ನು ಪ್ರಕಾಶಪಡಿಸಲೆಂದೇ ಆಗಿದೆ.

ನಮ್ಮಾಳ್ವಾರ್ ದೃಷ್ಟಿಯಲ್ಲಿ ತಿರುಮಾಲಿರುಂ ಶೋಲೈ, ಕ್ಷೀರಾಬ್ಧಿ, ವೈಕುಂಠ, ಶೀತಳವಾದ ತಿರುವೇಂಗಡ ಎಲ್ಲವೂ ಪರಮಾತ್ಮನಿಗೆ ನಿಮಿಷ ಮಾತ್ರವೂ ಅಗಲಿರಲಾಗದಂತಹ ಭೋಗ್ಯಸ್ಥಾನಗಳು. ಭಕ್ತನ ಅಂತರ್ಬಹಿಶ್ಚ ನಾರಾಯಣಃ ಎಂಬಂತೆ ಒಳಗೂ ಹೊರಗೂ ಅನವರತ ಆವರಿಸಿದಂತೆ ಈ ಸ್ಥಳಗಳಲ್ಲೂ ಅವನ ಸಾನ್ನಿಧ್ಯ ಅನವರತ, ನಿರಂತರ! ತಿರುವಾಯ್ಮೊಳಿಯ ನವಮ ಶತಕದ ಸಪ್ತಮದಶಕದ ಎಂಟನೆಯ ಪಾಶುರವೇ ಇದಕ್ಕೆ ಪ್ರಮಾಣ.

ತಿರುಮಾಲಿರುಂ ಶೋಲೈ ಮಲೆಯೇ,
ತಿರುಪ್ಪಾರ್ಕಡಲೇ, ಎನ್ ತಲೆಯೇ,
ತಿರುಮಾಲ್ ವೈಹುಂದಮೇ,
ತಣ್ ತಿರುವೇಂಗಡಮೇ, ಯೆನಮುಡಲೇ,
ಅರುಮಾಮಾಯತ್ತೆನಮಯಿರೇ,
ಮನಮೇ, ವಾಕ್ಕೇ, ಕರುಮಮೇ,
ಒರುಮಾನೊಡಿಯುಮ್ ಪಿರಿಯಾನೆನ್ನೂಮಿ
ಮುದಲ್ವ ನೊರುವನೇ

ಹೀಗೆ ವೈಕುಂಠ, ಪರಮಪದ, ತಿರುಮಲೆ ಈ ಎಲ್ಲ ಜಾಗಗಳ ಸಮಾನ ಮಹಿಮೆಯನ್ನು ತಿರುಮಾಲಿರುಂಶೋಲೈ ಮಲೆಯೂ ಗಳಿಸಿರುವುದನ್ನು ಈ ಪಾಶುರ ನಿರೂಪಿಸಿ ಆ ಮಲೆಯ ಹೆಗ್ಗಳಿಕೆಯನ್ನು ಪ್ರಕಾಶಪಡಿಸುತ್ತದೆ.

ಈ ಮಲೆಗಳನ್ನು ಸ್ತನಯುಗ್ಮಗಳೆಂದು ಕರೆದಾಗ ಅವುಗಳ ಮಹಿಮೆಯನ್ನು ಸಮಾನವಾಗಿ ನಾವು ಕಾಣಬೇಕೇ ವಿನಹ ಅವುಗಳ ಗಾತ್ರವನ್ನು ನಾವು ಕಾಣಬಾರದು. ಏತಕ್ಕೆಂದರೆ ತಿರುಮಲೆಯದು ವಿಸ್ತಾರವ್ಯಾಪ್ತಿ, ಏಳುಬೆಟ್ಟಗಳ ಮಹತ್ತಾದ ಪರ್ವತ ಅದು. ತಿರುಮಾಲಿರುಂಶೋಲೈಮಲೆಯು ಒಂದು ಕಿರಿಯ ಗಿರಿ ಅಷ್ಟೇ. ತಿರುಮಲೆಯ ಮೇಲೆ ಪರಮಾತ್ಮನು ಉಚ್ಚಿಯುಳ್ ನಿನ್ರಾನ್ ಎಂಬುವಂತೆ ಬೆಟ್ಟದ ಮೇಲೆ ವಿರಾಜಮಾನನಾದರೆ, ತಿರುಮಾಲಿರುಂಶೋಲೈಯಲ್ಲಿ ಬೆಟ್ಟದ ಅಡಿವಾರದಲ್ಲಿ ಸ್ವಾಮಿಯು ವಿಶಾಲ ದೇಗುಲದಲ್ಲಿ ಸಾನ್ನಿಧ್ಯಹೊಂದಿರುವುದು ವಿಚಿತ್ರವೆನಿಸುತ್ತದೆ. ಆದರೆ ಬೆಟ್ಟಕ್ಕೆ ಪ್ರಾಶಸ್ತ್ಯ ವಿರುವುದು ಏತಕ್ಕೆ ಎಂಬುವುದು ಗೊತ್ತಾಗದ ಅಂಶ. ಎರಡು ಗಿರಿಗಳೂ ಅವುಗಳ ಸ್ವಾಮಿಗಿಂತ ಮಹಿಮೆಯಲ್ಲಿ ಹೆಚ್ಚು. ಪಾಪ ಮತ್ತು ತಾಪಗಳನ್ನುಪಹರಿಸುವ ಮಹಿಮೆ ಹೊಂದಿವೆ. ಪಾಂಡ್ಯರಾಜಧಾನಿ ಮಧುರೆಗೆ ಅನತಿದೂರದಲ್ಲಿ ಈ ದಿವ್ಯ ಕ್ಷೇತ್ರ ಆಸನ್ನವಾಗಿದೆ. ಇದರ ದೈವವನ್ನು ಕಳ್ಳ ಅಳಗರ್, ಅಳಗರ್, ಸುಂದರಬಾಹು, ವನಗಿರೀಶ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಈ ಮಲೆಯನ್ನೂ ಸಹ ಅಳಹರ್ ತಿರುಮಲೈ ಎಂಬುದಾಗಿಯೇ ಆ ಪ್ರಾಂತ್ಯದ ಜನ ನಿರ್ದೇಶಿಸುತ್ತಾರೆ.

ಇಂತಹ ಪವಿತ್ರ ನೆಲೆಯನ್ನು ತಿರುವೇಂಗಡದಷ್ಟು ಸಾಂದ್ರವಾಗಿ ಆಳ್ವಾರ್‌ಗಳು ತಮ್ಮ ಪ್ರಬಂಧಗಳಲ್ಲಿ ಹಾಡಿಲ್ಲವೆಂದೇ ಹೇಳಬೇಕು. ಎಲ್ಲ ಆಳ್ವಾರುಗಳೂ ಸಹ ಅನುಸಂಧಾನಮಾಡಿಲ್ಲ. ಹೆಚ್ಚು ಶ್ರೀ ವೇಷ್ಣವ ಕ್ಷೇತ್ರಗಳನ್ನು ಹಾಡಿರುವ ತಿರುಮಂಗೈ ಆಳ್ವಾರ್ ಅವರು ತಮ್ಮ ಪೆರಿಯ ತಿರುಮೊಳಿಯಲ್ಲಿಯಂತೂ ಇದರ ಪ್ರಸ್ತಾಪವನ್ನೇ ಮಾಡಿಲ್ಲದಿರುವುದು ಅತ್ಯಂತ ವಿಸ್ಮಯವನ್ನು ಉಂಟುಮಾಡುತ್ತದೆ. ತಿರುಮಲೆಗೆ ಮೂರು ದಶಕಗಳನ್ನೇ ಬಳಸಿರುವ ಅವರು ಇದಕ್ಕೆ ಕಡೆಯಪಕ್ಷ ಒಂದು ದಶಕವನ್ನಾದರೂ ಬಳಸಬಹುದಾಗಿತ್ತಲ್ಲ. ಅವರಿಗೆ ತಿಳಿಯದೇ ಇದ್ದಿತೇ ಎನ್ನುವುದಕ್ಕೆ ಈ ಕ್ಷೇತ್ರ ಅವರದೇ ಆದ ತಿರುನೆಡುಂದಾಂಡಗಂ, ತಿರುಕ್ಕುಡಂ ದಾಂಡಗಂ, ಮಡಲುಗಳಲ್ಲಿ ಉದಾಹೃತವಾಗಿರುವುದಲ್ಲ! ಏತಕ್ಕೆ ತಿರುಮೊಳಿಯಲ್ಲಿ ಮಾತ್ರ ಅವ್ಯಕ್ತಗೊಂಡಿತು ಎನ್ನುವುದು ಉತ್ತರಿಸಲಾಗದ ಪ್ರಶ್ನೆಯಾಗುತ್ತದೆ.

ಅಂತೂ ಒಂದು ವಿಶೇಷವೆಂದರೆ ಕೆಲವೇ ಆಳ್ವಾರ್‌ಗಳು ಈ ಮಲೆಗೆ ಮಂಗಳಾಶಾಸನ ಗೈದರೂ ಕೂಡ ಆ ಸ್ತೋತ್ರ ಪಾಶುರಗಳು ಅತ್ಯಂತ ಧ್ವನಿಪೂರ್ಣವಾಗಿಯೂ ಓಜಸ್ಸಿನಿಂದ ಕೂಡಿದವುಗಳಾಗಿಯೂ ಪ್ರಕಾಶಿಸುವುದು ನಿಜಕ್ಕೂ ಉಲ್ಲೇಖನೀಯ ಅಂಶವೇಸರಿ.

ತಿರುಮಾಲಿರುಂಶೋಲೈ ಮಲೆಯನ್ನು ಕುರಿತು ಆಳ್ವಾರುಗಳು ಮಾಡಿರುವ ಮಂಗಳಾಶಾಸನ ವಿವರವನ್ನು ಈ ಕೆಳಗಿನ ಪಟ್ಟಿಯಿಂದ ನಾವು ತಿಳಿಯಬಹುದು.

ಪೆರಿಯಾಳ್ವಾರರು ತೆನ್ ತಿರುಮಾಲಿರುಂಶೋಲೈ ಎಂದೇ ವಿವರಿಸಿದ್ದಾರೆ. ಇದರಲ್ಲಿ ಎರಡು ವಿಶೇಷ ಒಂದು ತೆನ್ ಎಂದಾಗ ಮಧುರ, ಸುಂದರ ಸೊಬಗಿನ ಎಂದು ಅರ್ಥಮಾದರೆ ಮತ್ತೊಂದರ್ಥ ತೆಂಕಲಿನ ಎಂದು ಆಗುತ್ತದೆ. ಎರಡು ದಶಕಗಳಲ್ಲಿ ತಿರುಮಾಲಿರುಂಶೋಲೈಯ ವಿಶೇಷವನ್ನು ಪ್ರಾಕೃತಿಕ ವೈಭವವನ್ನು ನಿರೂಪಿಸುತ್ತಾರೆ. ಪಾಶುರಗಳ ಮೊದಲೆರಡು ಸಾಲುಗಳಲ್ಲಿ ಪರಮಾತ್ಮನ ಅವತಾರ ವೈಭವದ ದಿವ್ಯಲೀಲಾಚೇಷ್ಟೆಗಳನ್ನು ವಿವರಿಸಿ ಅಂತಹ ದೇವನು ನೆಲಸಿಹ ಮಲೆ ಎಂದು ಹೇಳಿ ನಂತರದ ಎರಡು ಸಾಲುಗಳಲ್ಲಿ ಮಲೆಯ ಸೊಬಗನ್ನೂ, ಪ್ರಾಕೃತಿಕ ವೈಭವವನ್ನೂ ವಿವರಿಸುತ್ತಾರೆ.

"ದೇವತಾಸ್ತ್ರೀಯರು ತಮ್ಮಕಾಲಂದುಗೆಗಳ ಗಲಗಲ ಧ್ವನಿಯೊಡನೆ ಸ್ನಾನಮಾಡುವ ನೂಪುರಗಂಗೆಯು ಅವಿರತವಾಗಿ ಪ್ರವಹಿಸುವ ದಕ್ಷಿಣದಿಕ್ಕಿಗೇ ಕಾಂತಿಯನ್ನು ಉಂಟುಮಾಡುವ ಮಲೆಯಿದು; ಮಂಗಳಾಶಾಸನದ ಧ್ವನಿಯು ಎಲ್ಲೆಡೆಯಿಂದಲೂ ಗುಂಜಾರವದಂತೆ ಹೊಮ್ಮಿ ತುಂಬಿ ಹೋಗಿರುವ ಮಲೆ ಇದು; ಮಲೆಯ ದೈವವಾದ ಅಳಹರ್ ಪ್ರತಿಕೂಲರನ್ನು ನರಕಕ್ಕೆ ದೂಡುವರು; ತಿರುಮಾಲಿರುಂಶೋಲೈಯೋ ಆಶ್ರಿತರನ್ನು ಸಂಸಾರವೆಂಬ ಕಾನನದಿಂದ ಪಾರುಗಾಣಿಸಿ ಉಜ್ಜೀವನ ಹೇತುವಾಗುತ್ತದೆ."

ಈ ರೀತಿ ದೈವಕ್ಕಿಂತ ಮಲೆ ಅಧಿಕ ಅನುಗ್ರಹದಾಯಿ. ಇಲ್ಲೊಂದು ಸ್ವಾರಸ್ಯ-- ಒಂದು ವೇಳೆ ಪ್ರತಿಕೂಲರು ಅಳಹರ್‌ನಿಂದ ನರಕಕ್ಕೆ ಅಟ್ಟಲ್ಪಟ್ಟಾಗ ಅಕಸ್ಮಾತ್ತಾಗಿ ಅವರು ತಿರುಮಾಲಿರುಂ ಶೋಲೈಯನ್ನು ಆಶ್ರಯಿಸಿದರು ಎಂದುಕೊಂಡರೆ ಆಗ ಮಲೆ ಅವರ ಕರ್ಮಗಳನ್ನು ನೀಗಿಸಿ ಪರಮಪದವನ್ನು ನೀಡುವ ಶಕ್ತಿಯನ್ನು ಹೊಂದಿರುತ್ತದೆ! ತಿರುವೇಂಗಡದಲ್ಲೂ ಇಂತಹುದೇ ಮಹಿಮೆಯನ್ನು ನಾವು ದರ್ಶಿಸುತ್ತೇವೆ ಅಲ್ಲವೆ?

"ಸ್ವರ್ಗಲೋಕದ ಕಲ್ಪವೃಕ್ಷದ ಹೂಗೊಂಚಲಿಂದ ಒಸರುವ ಜೇನು ತೊರೆಯಾಗಿ ಹರಿದು ಹಾಯುವ ಮಲೆ ತಿರುಮಾಲಿರುಂಶೋಲೈ; ಕಪ್ಪು ಆನೆಯ ವರ್ಣದಿಂದ ಜಿಗುಪ್ಸೆಪಟ್ಟು ಹಿಂತಿರುಗಿ ನೋಡದೆ ಓಡಿಹೋಗುವ ಹೆಣ್ಣಾನೆಗೆ ಕಡಲ್ವಣ್ಣನಾದ ದೇವನು ದಿವ್ಯಾಜ್ಞೆಯನ್ನು ಮಾಡಲು ಅದು ಮುಂದೆ ಹೋಗದೆ ತನ್ನ ಗಂಡನೆಡೆ ಸಾರುವಂತೆ

ಮಾಡುವ ದಿವ್ಯ ಮಲೆ ಇದು. (ಇಲ್ಲಿ ಆನೆಯ ಬಣ್ಣ ಕಪ್ಪು. ಅದರಂತೆಯೇ ಕಡಲ್ವಣ್ಣನ ಮೈಕಾಂತಿಯೂ ಕಪ್ಪು ಎಂದಾಗ ತನ್ನಂತೆ ಆ ಆನೆಯೂ ಎಂಬುವುದನ್ನು ಹೆಣ್ಣು ಆನೆಗೆ ಅರಿಕೆ ಮಾಡಿಕೊಟ್ಟು ಆ ಜೋಡಿಯನ್ನು ಸೇರಿಸಿದನೆಂಬ ಚಮತ್ಕಾರ) ದೇವತೆಗಳೂ, ಮುನಿವರರೂ ತಮ್ಮ ಅಪತ್ಸಂರಕ್ಷಕನಾದ ಧನವೆಂದು ಸೇವಿಸುವ ದಿವ್ಯವಾದ ಮಲೆ ಇದು. ಕೊಲ್ಲುವುದೇ ಕಾರ್ಯವಾಗಿ ಉಳ್ಳ (ರಕ್ಷಣೆಯ ಬದ್ಧಾಧರನೆನಿಸಿದ) ವೇಲಾಯುಧಧಾರಿಯಾದ ಹಿರಿಯನೂ, ಧರ್ಮದೀಕ್ಷೆ ಬದ್ಧಾಧರನೂ ಆದ ಮಲಯ ಪಾಂಡ್ಯಚಕ್ರವರ್ತಿಯು ಕೊಂಡಾಡುವ ಮಲೆ ಇದು; ಬಂಡುಣಿಗಳು ಸತ್ವವು ತಲೆಯೆತ್ತುವ ಪ್ರಭಾತ ಸಮಯದಲ್ಲಿ ಸಾವಿರನಾಮದ ಸೊಲ್ಲನ್ನು ಹಾಡುವ ಮಲೆ; ಪರಮಾತ್ಮನ ಪರ್ವ ಬಿಂಬಾಧರದ ಕೆಂಪುವರ್ಣವನ್ನು ಸೋಲಿಸುವ ಇಂದ್ರಗೋಪಗಳು ಎಲ್ಲೆಡೆಯೂ ಆವೃತಗೊಂಡ ಮಲೆ; ರಾತ್ರಿಯ ಕಾಲದಲ್ಲಿ ಸ್ವಚ್ಛಂದವಾಗಿ ಹೆಣ್ಣಾನೆಗಳೊಡನೆ ಗಂಡಾನೆಗಳು ಪ್ರಣಯಕೇಳಿಯಲ್ಲಿ ನಿರತವಾಗಿರುವ ಮಲೆ; ಈ ರೀತಿಯ ಕುಳಿರಾದ ಉದ್ಯಾನದಿಂದ ಅಲಂಕಾರಗೊಂಡ ತಿರುಮಾಲಿರುಂಶೋಲೈಮಲೈ ನಿತ್ಯ ವಿಭೂತಿಗಿಂತ ಹಿಂದೆನಿಸಲ್ಪಟ್ಟು ಪರಮಾತ್ಮನ ಕೈಂಕರ್ಯಕ್ಕೆ ಯಾವಾಗಲೂ ಅನುವಾಗಿನಿಂತು ಧನ್ಯವೆನಿಸಿದೆ."

"ಈ ಬೆಟ್ಟದಲ್ಲಿ ಕೊನ್ನೈ ಎಂಬ ಪುಷ್ಪವೃಕ್ಷಗಳು ಸಮೃದ್ಧ; ಅವುಗಳ ಹೂಗಳ ಬಣ್ಣ ಬಂಗಾರದಂತಹುದು; ಅವುಗಳ ದಳಗಳು ಮುರಿದ ಉಂಗುರದಂತೆಯೂ ಹೊನ್ನಿನಕಾಸಿನಂತೆಯೂ ಕಾಣುತ್ತವೆ. ಆ ದಳಗಳು ಕೆಳಗೆ ಉದುರಿದಾಗ ಕೊಡುಗೈಯ್ಯದಾನಿಯು ಹೊನ್ನಿನ ಉಂಗುರಗಳನ್ನೂ ಹೊನ್ನಿನ ಕಾಸುಗಳನ್ನೂ ಧಾರಾಳವಾಗಿ ನೀಡುತ್ತಿರುವಂತೆ ಕಾಣುವುದಂತೆ. ನಂಜನ್ನು ಉಗಿಯುವ ನಾಗವು ಹಸಿವಿಂದ ಕಣ್ಣೆಟ್ಟು ಬೆಟ್ಟದ ರಸ್ತೆಯಲ್ಲಿ ತೆವಳುತ್ತ ಬರುವ ಪೂರ್ಣ ಚಂದ್ರನನ್ನು ಆಹಾರವೆಂದು ಬಗೆದು ಅದರತ್ತ ತನ್ನ ಕೆನ್ನಾಲಿಗೆ ಚಾಚಿಕಬಳಿಸಲು ಹವಣಿಸುವ ದೃಶ್ಯದಿಂದ ಕಂಗೊಳಿಸುವ ಮಲೆ ಇದು. ಎಂತೆಂತಹ ವಿಸ್ಮಯಕಾರಿ ದೃಶ್ಯಗಳಿವೆ ಗೊತ್ತೆ. ಹೊನ್ನಿನ ಬಣ್ಣಗಳಿಂದ ಮೆರೆಯುವ ಹೊನ್ನೈ, ಶೆರುಂದಿ ಮತ್ತು ವೇಂಗೈ ಇವುಗಳೂ ಸಮೃದ್ಧವಾಗಿದ್ದು, ಅವು ಬೆಟ್ಟವೆಂಬ ಆಳ್ವಾರ್‌ಗೆ ಹೂಹಾರದಿಂದ ಅಲಂಕರಿಸುತ್ತಿರುವುದೋ ಎಂಬಂತೆ ಕಾಣಿಸುವುದಂತೆ ಈ ಬೆಟ್ಟ. ಗೊಲ್ಲ ಕುಲದಲ್ಲಿ ಜನಿಸಿ ಗೋವಿಂದಾಭಿಷೇಕ ಮಾಡಿಸಿಕೊಂಡವನ ಕೀರ್ತನೆಯನ್ನು ಕುರಿಂಜಿ ರಾಗದಲ್ಲಿ ಕುರವಸ್ತ್ರೀಯರು ಹಾಡಿ, ನರ್ತಿಸುವ ಸುಂದರ ದೃಶ್ಯದಿಂದ ಕೂಡಿದ ದಿವ್ಯ ಮಲೆ ಇದು. ಆಳ್ವಾರ್ ಈ ಮಲೆಯನ್ನು ಕುಲಮಲೈ (ಭಕ್ತರ ಇಷ್ಟಾರ್ಥಪ್ರದಾಯಿ) ಕೋಲಮಲೈ (ಸುಂದರವಾದಗಿರಿ) ಕುಳಿರ್ ಮಾಮಲೈ (ತಂಪಾದ ಶಿಖರದ ಮಲೆ) ನಿಲಮಲೈ (ಆಶ್ರಿತರನ್ನು ಅನುಗ್ರಹಿಸುವ ಮಲೆ) ನೀಂಡ ಮಲೈ (ಮಹೋನ್ನತ ತರು ಷಂಡನಿಬಿಡವಾದ ಮಲೆ) ಎಂದು ಕೀರ್ತಿಸುತ್ತಾರೆ. ತನ್ನ ಸೌಂದರ್ಯದಿಂದ ಜೇನ್ನೊಣಗಳಲ್ಲಿ ಉತ್ಸಾಹ ಮೂಡಿಸಿ ಅವು ಹಾಡಿ ತಣಿದಾಗ ಹಲವಿಧ ಫಲಗಳನ್ನು ತಿನ್ನಿಸಿ ಜೇನನ್ನು ಪಾನಮಾಡಿಸಿ ತೃಪ್ತಿಯನ್ನು ನೀಡುವ ಎಂದಿಗೂ ಬಾಡದ ಹೂಗೊಂಚಲುಗಳಿಂದ ನಳನಳಿಸುವ ಮಲೆ ಇದು; ಹೊನ್ನನ್ನು ಕೊಚ್ಚಿಕೊಂಡು ಬರುವ ನೀರಿಂದ ಸಮೃದ್ಧವಾದ ತೊರೆಗಳಿಂದ ಕಂಗೊಳಿಸುವ ಈ ಜಾಗದಲ್ಲಿ ಎಲ್ಲರೂ ನೀರಾಡುತ್ತಾರೆ. ದೇವತೆಗಳನ್ನು ಕೂಡಿಕೊಂಡು ಅರಸ ದೇವೇಂದ್ರನು ಹಗಲೂ, ಇರುಳೂ ಸಂಚರಿಸುವ ಸೂರ್ಯ ಚಂದ್ರರೂ ಒಂದು ಪ್ರದಕ್ಷಿಣೆ ಮಾಡುವ ಮಲೆ; ಹರಿದು ಬರುವಾಗ ಬಾಚಿಕೊಂಡು ಮುತ್ತು ರತ್ನ ಹೊನ್ನುಗಳನ್ನು ನಾಥನಾದ ಶ್ರಿಯಃಪತಿಯ ಪಾದಕಾಣಿಕೆಯಿತ್ತು ಬಳಲಿಕೆಯಿಂದ ನಿಂತು ನಿಂತು ಓಡುವ ಶಿಲಂಬಾರಿನ (ನೂಪುರ ಗಂಗೆಯ) ಮಾಧುರ್ಯದಿದ ಕಂಗೊಳಿಸುವ ಮಲೆ. ಸಾವಿರಾರು ತೊರೆ, ಪುಷ್ಪಗಳ ಗೊಂಚಲು, ಉದ್ಯಾನಗಳಿಂದ ಮೆರೆಯುವ ಮಲೆ. ಒಟ್ಟಿನಲ್ಲಿ ತಿರುಮಾಲಿರುಂಶೋಲೈ (ಭಗವಂತನ ವಿಹಾರ ಸ್ಥಳ)ವೆಂಬ ಹೆಸರಿಗನ್ವರ್ಥ ಮಲೆಯಾಗಿ ಆಕೃತಿಯಲ್ಲೂ ಮಹಿಮೆಯನ್ನು ಹೊಂದಿ ಅಚಲನಾಗಿ (ಬೆಟ್ಟವಂತೆ) ರುವ ದೈವದಿಂದ ಮೆರೆಯುತ್ತಿದೆ. ಆ ದೇವನಾದರೋ ಚತುರ್ವಿಧ ಅರ್ಚಾರೂಪಗಳ ಸಾರರೂಪನೂ, ಚತುರ್ವಿಧ ವೇದಗಳ ಸಾರರೂಪನೂ, ವೇದವೆಂಬ ಸಮುದ್ರದಿಂದ ಉದಿಸಿದ ಅಮೃತ ಸ್ವರೂಪಿಯೂ ವೇದಾಂತಗಳಲ್ಲಿ ಸಾರುವ ಅರ್ಥಗಳನ್ನು ಮೀರಿ ನಿಂತು ತನ್ನನ್ನು ತಾನೇ ಪ್ರಕಟಗೊಳಿಸಿರುವ ಮೂರ್ತಿಯಾಗಿಯೂ ಇರುವಂತಹ ದಿವ್ಯವಾದ ಮಲೆ"ಯೆಂದು ಪೆರಿಯಾಳ್ವಾರ್ ಅತಿಶಯವಾಗಿ ಮಂಗಳಶಾಸನ ಮಾಡುತ್ತಾರೆ.

ಪೆರಿಯಾಳ್ವಾರ್ ಅವರ ತಿರುಮೊಳಿಯ ೩ನೇ ಶತಕದ ೪ನೇ ದಶಕದ ೫ನೇ ಪಾಶುರದಲ್ಲಿ ತಿರುಮಾಲಿರುಂಶೋಲೈಯ ಪ್ರಸ್ತಾಪ ಬರುತ್ತದೆ. "ಗೊಲ್ಲಗೆಳೆಯರು ಕೃಷ್ಣನನ್ನು ಬಳಸಿ ನವಿಲುಗರಿಯ ಕೊಡೆಹಿಡಿದು ಅವನು ನಡೆಯುವುದಕ್ಕೆ ಅನುಸಾರವಾಗಿ ಆ ಕೊಡೆಯನ್ನು ಅವನ ಮೇಲೆ ಒಯ್ಯುತ್ತಾರೆ. ಕೊಳಲನ್ನು ಹಿಡಿದು ನವಿಲುಗರಿಯಿಂದ ಅಲಂಕೃತನಾದ ಕೃಷ್ಣನ ತಲೆದೆಸೆಯಲ್ಲಿ ಗೊಲ್ಲರು ಹೃದಯಂಗಮವಾಗಿ ಹಾಡಿ ನರ್ತಿಸುತ್ತಾ ಬರುವುದನ್ನು ಕಂಡೆ. "ಬೇರೆಯವರಿಗೆ ನಾನೆಂದು" ಹೇಳುವುದಿಲ್ಲ; "ನೀನು ಬೇರೆಯವರಿಗೆ" ಎಂದೂ ಹೇಳದಿರು. ತಿರುಮಾಲಿರುಂಶೋಲೆಯಲ್ಲಿ 'ನನ್ನನ್ನು ತನಗೆ ಮಾಡಿಕೊಂಡವನು, ಎಂತಹವನೂ ಆಶ್ಚರ್ಯಪಡತಕ್ಕ ಗುಣಚೇಷ್ಟಿತನು, ವಿಜಯವೇ ಸ್ವಭಾವವಾಗಿ ಉಳ್ಳ 'ಅವನಿಗೆ ಇವಳು ತಕ್ಕವಳು' ಎಂದು ಭಾವಿಸಿ ಸಮರ್ಪಿಸಿಕೊಳ್ಳಿ. ಹಾಗೆ ಸಮರ್ಪಿಸಿಕೊಂಡರೆ, ತಳಮಳವೆಲ್ಲ ಅಡಿಯೊಂದಿಗೆ ಕಳೆಯುವುದು."

ಪೆರಿಯಾಳ್ವಾರ್ ತಿರುಮೊಳಿಯ ಐದನೇ ಶತಕದ ಮೂರನೇ ದಶಕದಲ್ಲಿ ತಿರುಮಾಲಿರುಂಶೋಲೈಯ ಪ್ರಸ್ತಾಪ ಕಂಡುಬರುತ್ತದೆ. ಇದರಲ್ಲಿನ ೯ ಪಾಶುರಗಳಲ್ಲಿ ತಿರುಮಾಲಿರುಂ ಶೋಲೈ ಎನ್ನಾಯ್ ಎಂಬುದಾಗಿ ಮಾಲಿರುಂಶೋಲೈ ಮಲೈಯ ಸುಂದರ ಬಾಹುವಿನ ಸಂಬೋಧನೆ ಇರುವುದಲ್ಲದೆ ಮಲೆಯ ವೈಭವವನ್ನು ವಿವರಿಸುವಂತಹ ವಿಚಾರವನ್ನು ತಿಳಿಸುವಂತಹ ಯಾವ ಅಂಶವೂ ಕಂಡುಬರುವುದಿಲ್ಲ. ಆದ್ದರಿಂದ ಈ ಲೇಖನದಲ್ಲಿ ಇದರ ಪ್ರಾಮುಖ್ಯತೆಯ ಬಗ್ಗೆ ಪ್ರಸ್ತಾಪ ಮಾಡಿಲ್ಲ. ಈ ೯ ಪಾಶುರಗಳಲ್ಲಿ ಶ್ರೀಮನ್ನಾರಾಯಣನ ಲೀಲಾ ವೈಭವವನ್ನು ಸಾಮಾನ್ಯವಾಗಿ ನಿರೂಪಿಸಿ ಕಡೆಗೆ ತಿರುಮಾಲಿರುಂ ಶೋಲೈಯ ದೈವಕ್ಕೆ ಈ ಮಹಿಮೆಯನ್ನು ಜೋಡಿಸಲಾಗಿದೆ ಅಷ್ಟೆ.

ಆಂಡಾಳ್ ದೃಷ್ಟಿಯೇ ಬೇರೆ. ಅವಳು ತಿರುಮಾಲಿರುಂಶೋಲೆಗಿಂತ ಅದರ ದೈವ ಸುಂದರ ಬಾಹುವಿನಲ್ಲಿ ಕೃಷ್ಣನನ್ನು ಕಂಡು ಅವನು ತನ್ನನ್ನು ಕರೆದುಕೊಳ್ಳದೆ ಇರುವುದರಿಂದ ವಿಶ್ಲೇಷೆಯಿಂದ ಬಾಧೆಪಡುತ್ತಿರುವಳು. ಅವನು ತನ್ನನ್ನು ಸೇರಿಸಿಕೊಳ್ಳುವ ಉಪಾಯವನ್ನು ನಮ್ರವಾಗಿ ನಿವೇದಿಸಿಕೊಳ್ಳುವಳು.

ನಾಲ್ಕನೇ ದಶಕದ ಒಂದನೇ ಪಾಶುರದಲ್ಲಿ ಕೂಡಲ್ ಎಂಬುವ ಚಿತ್ರವಿಟ್ಟು ಸುಂದರಬಾಹುವು ತನ್ನನ್ನು ಇಚ್ಚಿಸಿದರೆ ಚಿತ್ರದಲ್ಲಿ ಕೂಡಲಿ ಎಂದು ಪ್ರಾರ್ಥಿಸುತ್ತಾಳೆ ಜ್ಞಾನಾಧಿಕರಾದ ಹಲವರು ನಿತ್ಯಸೂರಿಗಳು ಕೈಮುಗಿಯುವಂತಹ ದೇವರಾದ ಪರಮೋದಾರರಾದ (ತನ್ನನ್ನೇ ಎಲ್ಲರಿಗೂ ಕೊಡುವಂತಹ) ಮಾಲಿರುಂಶೋಲೈನಲ್ಲಿ ನನ್ನನ್ನು ಕೈಹಿಡಿಯಲು ನಿಂತಿರುವವರು ಏಕಾಂತದಲ್ಲಿ ನನ್ನ ಸೇವೆಯನ್ನು ಕೈಕೊಳ್ಳುವವರಾದರೆ "ಕೂಡಲೇ" ನೀನು ಸೇರು.

ನಾಚ್ಚಿಯಾರ್ ತಿರುಮೊಳಿಯ ೯ನೇ ಶತಕ ಹೀಗೆ ನಡೆಯುತ್ತದೆ.

"ಎಲ್ಲೆಲ್ಲೂ ಇಂದ್ರಗೋಪಗಳು ಕೆಂಪಾದ ಸಿಂಧೂರವನ್ನು ಎರಚಿದಂತೆ ಹರಡಿದೆ. ದೇವತೆಗಳು

ತನ್ನನ್ನು ಆಶ್ರಯಿಸಿದಾಗ ಮಂದರಪರ್ವತವನ್ನು ಕ್ಷೀರಾಬ್ಧಿಯಲ್ಲಿಟ್ಟುಕಡೆದು ಅಮೃತವನ್ನು ಹೊರತಂದನು. ಅಂತಹ ಸುಂದರಬಾಹುವಿನ ತೋಳ ಬಲೆಯಲ್ಲಿ ನಿಂತು ನಾನು ಉಜ್ಜೀವಿಸುವೆನೆ? (ಇಂದ್ರಗೋಪಗಳು ಸುಂದರ ಬಾಹುವಿನ ಬಿಂಬೋಷ್ಠದಂತಿದೆ. ಅವನು ಬೀಸಿದ ಬಲೆಯಿಂದ ತಪ್ಪಿಸಿಕೊಂಡು ಉಜ್ಜೀವಿಸಬಲ್ಲೆನೆ? ಇಲ್ಲವೇ ಇಲ್ಲ. ಸುಂದರಬಾಹುವು ಸಮುದ್ರವನ್ನು ಕಡೆದಾಗ ಹೆಣ್ಣು, ಅಮೃತವನ್ನು ಪಡೆದ ಈಗ ಪಡೆಯಕೂಡದೆ)"

"ತಿರುಮಾಲಿರುಂಶೋಲೈನ ತಪಲಿನಲ್ಲಿ ಯುದ್ಧೋನ್ಮುಖವಾದ ಆನೆಗಳು ಸ್ವೇಚ್ಛೆಯಾಗಿ ವಿಹರಿಸುತ್ತಿರುವಾಗ ದೆಟ್ಟದಲ್ಲಿ ಹೂತಮೊಲ್ಲೆ ಹೂಗಳು ಸುಂದರಬಾಹುವಿನ ಹುಸಿನಗೆಯನ್ನು ಸ್ಮಿತವದನವನ್ನು ನೆನಪಿಗೆ ತಂದು, ನನ್ನನ್ನು ಅಪರಿಹಸಿಸುವಂತೆಯೇ ತೋರುತ್ತದೆ. ಕಪ್ಪನೆಯ ಪಡಾ ಹೂಗಳಂತೂ ಅವನ ವರ್ಣಸಾಮ್ಯದಿಂದ ವಿರಹ ವ್ಯಥೆಯನ್ನು ಹೆಚ್ಚು ಮಾಡುತ್ತದೆ. ಈ ವಿಷಯದಲ್ಲಿ ನನಗಿಂತಲೂ ಹೆಚ್ಚು ಮೋಹಾಂಧಳಾಗಿರುವ ನಿನಗಾಗಲಿ, ಇತರರಿಗಾಗಲೀ ಅವನ ತೋಳಮಾಲೆ ನನ್ನಲ್ಲಿ ದೆಳಸಿದ ವ್ಯಥೆಯನ್ನು ಹೇಗೆ ಹೇಳಿಕೊಳ್ಳಲಿ ನೀನೇ ದುಃಖಿ ನನಗಿಂತ ಮೊದಲು. ಹಾಗಿರುವಾಗ ನನ್ನ ದುಃಖ ಹೇಳಿತಾನೇ ಏನು ಪ್ರಯೋಜನ!

"ಪಂಚಮಹಾಪಾತಕಗಳಂತೆ ನನ್ನನ್ನು ಹಿಂಸಿಸುತ್ತಿರುವ ವಿಶಾಲತೋಪಿನಲ್ಲಿ ಕೂಗುತ್ತಿರುವ ಕೋಗಿಲೆಗಳೆ, ನವಿಲುಗಳೆ, ಚೆಲುವಾದ ಕರುವಿಳೈ ಹೂಗಳೇ, ಕಳಾಹಣ್ಣುಗಳೆ, ಸುಂದರ ಬಣ್ಣ ಸುವಾಸನೆಗಳುಳ್ಳ ಪೂವೈ (ಕಪ್ಪು ಅಗಸೆ) ಮಲರುಗಳೆ! ತಿರುಮಾಲಿರುಂಶೋಲೈನಲ್ಲಿ ನಿತ್ಯವಾಸಮಾಡುವ ನನ್ನ ಸ್ವಾಮಿಯ ರೂಪಕಾಂತಿಯನ್ನು ಹೊಂದಿರುವಿರಲ್ಲ ನಿಮಗೇನು ತಾನೆ ಇದರಿಂದ ಪ್ರಯೋಜನ! ಹೀಗೆ ಭಗವಂತನೂ, ಚೈತನ್ಯವುಳ್ಳವರೂ (ಪಕ್ಷಿ, ಕೀಟಗಳು) ಅಚೇತನರೂ (ಹೂ, ಹಣ್ಣುಗಳು) ಎಲ್ಲರೂ ಸೇರಿ ನನ್ನನ್ನು ಹಿಂಸಿಸಿದರೆ ನಾನು ಹೇಗೆ ಬದುಕಲಿ. ಸೇರಿದವನ ಹಿಂಸೆಮಾತ್ರವಲ್ಲದೆ ಅವನ ವಿರಹದಲ್ಲಿ ನೀವು ನನಗೆ ಸಮಾಧಾನ ಪಡಿಸುವುದಕ್ಕೆ ಬದಲಾಗಿ ಇನ್ನೂ ಬಾಧೆಗೊಳಿಸುತ್ತಿರುವಿರಲ್ಲ ಅವನ ರೂಪ ವರ್ಣಗಳನ್ನೇಕೆ ಧರಿಸಿದಿರಿ. ಅವನು ಒಂದು ವೇಳೆ ಆ ರೂಪ ಬಣ್ಣಗಳನ್ನು ನಿಮಗೆ ನೀಡಿದರೆ ಅವು ನಿಮಗೆ ಬೇಡವಾಗಿದ್ದಲ್ಲಿ, ಬೇಡವೆನ್ನದೆ ಏಕೆ ಧರಿಸಿದಿರಿ."

"ಎತ್ತರವಾಗಿ ಬೆಳೆದ ಹೂತ ಮರಗಳಿರುವ ತೋಟದ ತಿರುಮಾಲಿರುಂಶೋಲೈನಲ್ಲಿ ಕಾರ್ಮುಗಿಲುಗಳಂತೆ ಸಂದಣಿಸಿರುವ ಪುಂಡರೀಕಾಕ್ಷನ ರೂಪಸಾದೃಶ್ಯದಿಂದ ಮರಯುವ ಹೂವಿನ ಮೇಲೆ ಕುಳಿತ ಬಂಡುಗಳ ಗುಂಪೇ, ಅಂದವಾದ ನೀರು ತುಂಬಿದ ದೊಣೆಗಳೆ, ಕೊಳದಲ್ಲಿ ಕಂಗೊಳಿಸುವ ಕೆಂದಾವರೆಗಳೆ, ನಿಮ್ಮಿಂದ ಬಾಧಿಸಲ್ಪಟ್ಟ ನನಗೆ ನೀವು ನಿಮ್ಮನ್ನು ಬಿಟ್ಟು ಬದುಕುವ ಉಪಾಯವನ್ನು ಹೇಳಿಕೊಡಿ." (ಸೀತೆಗೆ ರಾಕ್ಷಸಿಯರ ಕ್ರೂರ ನೋಟವು ಅಹಿತವಾದಂತೆ ಗೋಪಿಗೆ ಈ ಸುಂದರ ದೃಶ್ಯಗಳೂ ವಿರಹದ ಆವೇಗದಲ್ಲಿ ತ್ರಾಸದಾಯಕವಾಗಿವೆ.) ಇವುಗಳು ರಕ್ಷಣೋಪಾಯವನ್ನು ಹೇಳುವಷ್ಟು ತಾನು ನಿರ್ಗತಿಕಳೆ? ಎನ್ನುವ ಭಾವ. ಏಕೆಂದರೆ ಧರ್ಮರಾಜನು ಭೀಷ್ಮರನ್ನು ಪರಿಹರಿಸಿಕೊಳ್ಳಲು ನಿಮ್ಮನ್ನು ಹೇಗೆ ಕೊಲ್ಲಬೇಕು ಎಂದು ಆಶ್ರಯಿಸಿ ಅವರಿಂದಲೇ ಶಿಖಂಡಿಯನ್ನು ನಿಲ್ಲಿಸುವ ಉಪಾಯತಿಳಿದು ಕೊಂಡಂತೆ ಗೋದೆ ದುಂಬಿ, ದೊಣೆ, ಕೆಂದಾವರೆ ಇವೆಲ್ಲ ಪರಮಾತ್ಮನ ರೂಪ ಅಂಗಗಳನ್ನು ಹೊಂದಿರಲು ನಿಮ್ಮನ್ನು ಬಿಟ್ಟು ನಾನು ಬದುಕುವುದು ಹೇಗೆ ಎಂಬ ಉಪಾಯವನ್ನು ಅವುಗಳನ್ನೇ ಕೇಳುತ್ತಾಳೆ . ನಾವಿಲ್ಲದ ಒಂದು ಜಾಗವಿದೆ ಅಲ್ಲಿಗೆ ಹೋಗಿ ಬದುಕು ಎಂದು ಅವು ಹೇಳಬೇಕು. ಹಾಗೆ ಜಾಗವಿರುವುದೇ?

ಪರಿಮಳದಿಂದ ತುಂಬಿದ ತಿರುಮಾಲಿರುಂಶೋಲೈಯ ಸ್ವಾಮಿಗೆ ನೂರು ಪಾತ್ರೆಗಳಲ್ಲಿ ಬೆಣ್ಣೆಯನ್ನು ಸಮರ್ಪಿಸುವೆ. ಕ್ಷೀರಾನ್ನವನ್ನು ಸಮರ್ಪಿಸುವೆ ಎಂದು ನಿವೇದಿಸಿಕೊಳ್ಳುತ್ತಾಳೆ. ದಿನ ದಿನವೂ ವೃದ್ಧಿಹೊಂದುವ ಸಂಪತ್ತಿನ ಶ್ರಿಯಃಪತಿಯು ನಾನು ಬಾಯಿಯಲ್ಲಿ ಹೇಳಿದ್ದನ್ನು ಮಾಡಿಸಿ ಸ್ವೀಕರಿಸಕೂಡದೇನು ಎಂದು ಹಲುಬುತ್ತಾಳೆ. ಈ ಹಂಬಲನ್ನೇ ಮುಂದೆ ರಾಮಾನುಜರು ನೆರವೇರಿಸಿ ಗೋದಾಗ್ರಜರೆನಿಸಿಕೊಂಡದ್ದು. ತೆಂಕಣಗಾಳಿ ಪರಿಮಳವನ್ನು ತಂದು ಬೀಸುವ ತಿರುಮಾಲಿರುಂಶೋಲೈನಲ್ಲಿನ ಸ್ವಾಮಿ ಇಲ್ಲಿಗೆ ಬಂದು ನನ್ನಿಂದ ಇವನ್ನು ಮಾಡಿಸಿಕೊಂಡು ಭುಂಜಿಸಿ ಆನಂದಿಸಿದ್ದಲ್ಲಿ ಅವನು ಮಾಡಿದ ಉಪಕಾರಕ್ಕಾಗಿ ನಾನು ಒಂದಕ್ಕೆ ನೂರು ಸಾವಿರದಷ್ಟು ಮಾಡಿ ಸಮರ್ಪಿಸಿದಂತೆ ಊಳಿಗವನ್ನು ಎಸಗುತ್ತೇನೆ. ಅವನಿಗೆ ದಾಸೀಭೂತೆಯಾಗಿ ಸಮಗ್ರ ಕೈಂಕರ್ಯವನ್ನೂ ಕೈಕೊಳ್ಳುತ್ತೇನೆ.

"ಭರದ್ವಾಜ ಹಕ್ಕಿಗಳ ಗುಂಪು ಮುಂಜಾನೆ ಎದ್ದು ತಿರುಮಾಲಿರುಂಶೋಲೈ ಸ್ವಾಮಿಯ, ದ್ವಾರಕಾಪತಿಯ, ವಟಪತ್ರಶಾಯಿಯ ಆಗಮನವಾರ್ತೆಯನ್ನು ಸಾರುವಂತೆ ಕೂಗುತ್ತಿವೆ. ಅವನ ಆಗಮನವನ್ನು 'ಮರುಳ್' ಎಂಬ ಗಾಯನ ಪ್ರಕಾರದಿಂದ ಸಾರುತ್ತವೆ. ಆ ಗಾನ ನಿಜವಾಗಕೂಡದೆ! ನನ್ನ ಸ್ವಾಮಿ ಬರಕೂಡದೆ?

" 'ಕೊಂಗು' ಮಲರುಗಳು ಅಲರುವ ಮಾಲಿರುಂಶೋಲೈಯೇ ಕೊನ್ನೈ (ಗಂಡು ಸುರಗಿ) ಮರಗಳಲ್ಲಿ ಬಿಡುವ ಹೊಂಬಣ್ಣದ ಹೂಗಳು ಪೂಜಾರ್ಹವಾಗದೆ ವ್ಯರ್ಥವಾಗಿರುವಂತೆ ಅವು ಸುಮ್ಮನೆ ಕೊಂಬೆಗಳಲ್ಲಿ ತೂಗಾಡುವಂತೆ ನಾನೂ ತೂಗಾಡುತ್ತಿದ್ದೇನೆ. ಶಿಶುಪಾಲನಿಗೆ ರುಕ್ಮಿಣಿಯನ್ನು ಕೊಡುವುದಾಗಿ ವಾಗ್ದಾನ ಮಾಡಿದ ಮೇಲೆ ಊರಹೊರಗಿನ ತೋಪಿನಲ್ಲಿ ಸ್ವಯಂವರದ ಕಾಲದಲ್ಲಿ ಅಂದವಾದ ಬಾಯಿಯಲ್ಲಿ ಊದಿದ ಕೃಷ್ಣನ ಶಂಖಧ್ವನಿಯಂತೆ, ರಾಮಾಯಣದಲ್ಲಿ ರಾವಣನು ಮಾಯಾಶಿರಸ್ಸನ್ನು ತೋರಿಸಿದಾಗ ಸೀತೆಯ ಕಿವಿಗೆ ಬಿದ್ದ ಶ್ರೀರಾಮನ ಶಾರ್ಙ್ಗದ ಠೇಂಕಾರಧ್ವನಿ ಈಗ ನನಗೂ ಸಮೀಪಿಸಕೂಡದೇನು! ರುಕ್ಮಿಣಿ, ಸೀತೆಗೆ ಆದ ಸಂತೋಷ ನನಗೂ ಉಂಟಾಗಲಿ.

"ಚಂದನ ಅಗರನ್ನು ಹೊತ್ತ, ತಟಾಕಗಳನ್ನು ಅಳಿಸಿಕೊಂಡು ಬರುವ ನೂಪುರಗಂಗೆ ಹರಿಯುವ ತಿರುಮಾಲಿರುಂಶೋಲೈನ ಸುಂದರ ಬಾಹುವಿನ ವಿಷಯವಾಗಿ ದುಂಬಿಗಳ ಬಣ್ಣದಂತೆ ಕುರುಳುಗಳನ್ನುಳ್ಳ ಗೋದೆಯು ರತ್ನಗಳನ್ನು ಸೇರಿಸಿದಂತೆ ಭಗವಂತನ ಕಲ್ಯಾಣಗುಣಗಳನ್ನು ಸೇರಿಸಿ ಹೇಳಿದ ಚೆಂತಮಿಳಿನ ಈ ಹತ್ತು ಪದ್ಯಗಳನ್ನು ಬಲ್ಲವರು ಶ್ರಿಯಃಪತಿಯ ಪಾದಗಳನ್ನು ದೃಢವಾಗಿ ಸೇರುತ್ತಾರೆ."

ನಮ್ಮಾಳ್ವಾರ್ ಅವರ ತಿರುವಾಯ್ಮೊಳಿಯಲ್ಲಿ ತಿರುಮಾಲಿರುಂಶೋಲೈ ಮಂಗಳಾಶಾಸನಗೊಂಡಿದೆ.

ಯೌವನವಿರುವಾಗಲೇ ದಿವ್ಯಮಾಯಾಗುಣ ಚೇಷ್ಟಿತನಾದ ಸರ್ವೇಶ್ವರನ ದಿವ್ಯಕ್ಷೇತ್ರ ತಿರುಮಾಲಿರುಂಶೋಲೈ ಎಂಬ ಪರ್ವತ ಪ್ರದೇಶವನ್ನು ನಿರಾಯಾಸವಾಗಿ ಆಶ್ರಯಿಸೋಣವೇ. ಯುಕ್ತ ಚಾತುರ್ಯವತಿಯರಾದ ಯೌವನ ಸ್ತ್ರೀಯರ ವಿನಯಾದಿ ಗುಣದ ನಟನೆಗೆ ಮರುಳಾಗದೆ ದಿವ್ಯಘೋಷವನ್ನು ಉಂಟುಮಾಡುವ ಶಂಖಧಾರಿ ಅಳಗರ್ ನೆಲಸಿರುವ ದಿವ್ಯಕ್ಷೇತ್ರ (ಪೂರ್ಣಚಂದ್ರಾಲಂಕೃತಿಯಿಂದ) ತಿರುಮಾಲಿರುಂಶೋಲೈಯನ್ನು ಸ್ತೋತ್ರಮಾಡಿ ಉಜ್ಜೀವಿಸು. ನಿಷ್ಫಲವಾದ ಕಾರ್ಯಗಳನ್ನು ಎಸಗದೆ ನೀಲ ಮೇಘಶ್ಯಾಮನೂ ಉದಾರಶೀಲನಾದ ಭಗವನ್ತನು ವಾಸಿಸುವ ಸುಂದರ ವನಗಳಿದ ರಂಜಿಸುವ ತಿರುಮಾಲಿರುಂಶೋಲೈ ಪರ್ವತದ ಪಾರ್ಶ್ವಮಲೆಯನ್ನು ಆಶ್ರಯಿಸಿದರೂ ಸಹ ನಮಗೆ ಸ್ವರೂಪಾನುರೂಪ ಕೃತ್ಯವೆನಿಸುತ್ತದೆ. ಬಲವಾದ ಕರ್ಮಗಳನ್ನು ನಾಶಪಡಿಸಿ ತನ್ನ ಕೈಂಕರ್ಯದಲ್ಲಿ ಚೇತನರು ಉಜ್ಜೀವಿಸುವಂತೆ ಮಾಡುವ ಗೋವರ್ಧನಗಿರಿಧಾರಿಯು ಗೋಕುಲವನ್ನು ಸಂರಕ್ಷಿಸಿದಂತೆ, ಅಂತಹ

ನ ನಿತ್ಯವಾಸಕ್ಷೇತ್ರ ಕಾಲಮೇಘಗಳಿಂದ ಕಂಗೊಸುವ ತಿರುಮಾಲಿರುಂಶೋಲೈಯನ್ನು ಆಶ್ರಯಿವುದೇ ಯುಕ್ತವು. ದೇಹಬಲದ ಆಧಾರದಿಂದ ಾಪಗಳನ್ನು ಮಾಡದೆ ಆಶ್ರಿತರಕ್ಷಕನೂ ಚಕ್ರಧಾಯೂ ಆದ ಭಗವಂತನ ದಿವ್ಯಕ್ಷೇತ್ರ ತಿರುಮಾಲಿಂಶೋಲೈಯು ನಿರ್ಮಲೋದಾರ ಸರಿತ್ಪರಿವೃತಾಗಿರುವಾಗ ಅದರ ಪಾರ್ಶ್ವದ ಮಲೆಯನ್ನು ಆಶ್ರಯಿಸುವುದು ಉಜ್ಜೀವನೋಪಾಯವೇ ಸರಿ! ವಿಷಯಾನ್ತರ ಪ್ರವೃತ್ತಿಯ ನೀಚ ಕೆಲಸಗಳನ್ನು ಮಾಡದೆ ಸುರಕ್ಷಿತವಾಗಿಟ್ಟಿದ್ದ ಬೆಣ್ಣೆಯನ್ನು ಚೌರ್ಯದಿಂದ ಭಕ್ಷಿಸಿದವನ ವಾಸಕ್ಷೇತ್ರವೂ, ಮರಿ ಆನೆಯೊಡನೆ ಕೂಡಿದ ತಾಯಿಯಿಂದ ಕಂಗೊಳಿಸುವ ತಿರುಮಾಲಿರುಂಶೋಲೈಗೆ ಹೋಗುವ ಮಾರ್ಗವನ್ನು ಸ್ಮರಿಸುವುದೇ ಉಪಾಯ. ಸಂಸಾರವೆಂಬ ನರಕದ ಅಂಬುಧಿಯಲ್ಲಿ ತೊಳಲಾಡದೆ, ಅಂದು ವರಾಹನು ಭೂಮಿಯನ್ನು ಉದ್ಧರಿಸಿದನಲ್ಲ ಅವನ ನಿತ್ಯವಾಸ ಕ್ಷೇತ್ರವೂ ನಿಷ್ಕಳಂಕವಾದ ಚಂದ್ರನಿಂದ ಅಲಂಕೃತವಾದ ಶಿಖರವನ್ನುಳ್ಳ ಮಾಲಿರುಂಶೋಲೈಯನ್ನು ಆಶ್ರಯಿಸುವುದೇ ಉಪಾಯವು. ಅದೇ ದೃಢವಾದ ಚೈತನ್ಯವು. ಪ್ರಾಣಿಗಳಲ್ಲಿ ಬಲವನ್ನಿತ್ತು ಪೋಷಿಸುವ ಶ್ರೀಕೃಷ್ಣನು ನೆಲಸಿರುವ, ನಿತ್ಯಸೂರಿಗಳು ಬಂದು ಸೇವೆ ಎಸಗುವ ಮಾಲಿರುಂಶೋಲೈ ಅನ್ನು ಪ್ರದಕ್ಷಿಣೆ ಮಾಡಿ ನಿತ್ಯವೂ ಸೇವಿಸುವುದೇ ನ್ಯಾಯವು. ಪ್ರಬಲ ಪಾಪಗಳಲ್ಲಿ ಮಗ್ನರಾಗಿರದೆ ಪೂತನೆಯನ್ನು ಮರ್ದಿಸಿದ ಪರಮಾತ್ಮನ ಕ್ಷೇತ್ರವೂ ತರುಣವಾರುಣಗಳಿಂದ ಸಂಸೇವಿತವಾದ ವನಗಳಿಂದ ರಾಜಿಸುವ ಮಲೆಯನ್ನು ಭಜಿಸಿರಿ. ಇದೇ ಉಜ್ಜೀವನ ಹೇತುವು. ದ್ರವ್ಯಾರ್ಜನೆಗಾಗಿ ಚೌರ್ಯಾದಿ ಕೃತ್ಯಗಳನ್ನೆಸಗದೆ ಗೀತಾದಿ ವೇದಾರ್ಥಗಳನ್ನು ವಿಶದೀಕರಿಸತಕ್ಕ ಭಗವನ್ತನ ಕ್ಷೇತ್ರವೂ ಮಯೂರಗಳಿಂದ ಕಂಗೊಳಿಸುವ ಮಾಲಿರುಂಶೋಲೈಯನ್ನು ಪ್ರವೇಶಿಸಿದರೆ ಅದೇ ಮೋಕ್ಷವು; ಪುರುಷಾರ್ಥವು." ಇದು ನಮ್ಮಾಳ್ವಾರ್ ಅವರ ಹತ್ತು ಪಾಶುರಗಳ ಸಾರಾಂಶ.

ತಿರುವಾಯ್ಮೊಳಿಯ ೧೦ನೇ ಶತಕದ ೭ನೇ ದಶಕದಲ್ಲಿ ತಿರುಮಾಲಿರುಂಶೋಲೈಯ ವಿಚಾರ ಈ ಕೆಳಗೆ ಕಂಡಂತೆ ವಿವರಿಸಲ್ಪಟ್ಟಿದೆ.

"ವಂಚಕನೂ ಚೋರನೂ ಮಾಯಾಚೇಷ್ಟಿತನೂ ಆದ ಆತನು, ಕೃತ್ರಿಮಕವಿತ್ವವುಳ್ಳವನಾದ ನನ್ನ ಸಮೀಪಕ್ಕೆ ಬಂದು ನನ್ನ ಮನಸ್ಸಿನೊಳಗೂ ಆತ್ಮವಸ್ತುವಿನೊಳಗೂ ಸೇರಿ ಶ್ರೀದೇವಿ ಭೂದೇವಿಗಳಿಗೂ ತಿಳಿಯದಂತೆ ನನ್ನ ಮನಸ್ಸು ಆತ್ಮವಸ್ತುಗಳನ್ನು ಭಕ್ಷಿಸಿ ತಾನೇ ಅಲಭ್ಯವಾದ ಫಲವನ್ನೂ ಪಡೆದು ಭಗವನ್ತನು ಪರಿಪೂರ್ಣನಾದನು. ರಮ್ಯವಾದ ಕವಿತ್ವಮಾಲೆ ಮಾಡಬಲ್ಲವರಾದ ನೀವು ನಿಮ್ಮ ಪ್ರಾಣವನ್ನು ರಕ್ಷಿಸಿಕೊಂಡು ತಿರುಮಾಲಿರುಂಶೋಲೈ ಯೆಂಬ ವನಗಿರಿಯನ್ನು ಸೇವಿಸಿರಿ.

"ಭಗವನ್ತನು ಸಮಗ್ರವಾಗಿ ನನ್ನ ಆತ್ಮಭೋಗವಂ ಮಾಡಿ ತಾನೇ ಪ್ರಧಾನನಾಗಿ, ಪರಿಪೂರ್ಣನಾಗಿ ಸಕಲ ಲೋಕಗಳೂ ಸಕಲಾತ್ಮವರ್ಗಗಳೂ ತಾನೇ ಎಂಬಂತೆ ಅವುಗಳಿಗೆ ಅನ್ತರಾತ್ಮನಾಗಿ, ನಾನೆಂಬ ವಸ್ತುವೂ ತಾನೇ ಆಗಿ ತನ್ನನ್ನು ತಾನೇ ಸ್ತೋತ್ರ ಮಾಡಿ, ನನಗೆ ಅದರಿಂದ ಭೋಗ್ಯವಾದ ಮಧು ಕ್ಷೀರೇಕ್ಷುರಸಾಮೃತ ರೂಪಿಯಾಗಿ ಶ್ರೀವನಾದ್ರಿಯ ಸ್ವಾಮಿಯಾಗಿ ನಿಂತು ಬಿಟ್ಟನು.

"ಎಲ್ಲಾ ಪ್ರಕಾರದಲ್ಲೂ ನನ್ನ ಆತ್ಮಾನುಭವವಂ ಮಾಡಿ, ನನ್ನ ಅಜ್ಞಾನಾದಿಗಳಿಗೆ ಕಾರಣವಾದ ಈ ಪ್ರಾಕೃತ ಶರೀರದಲ್ಲಿ ಪ್ರವೇಶಿಸಿ, ಅಭಿಮಾನ ಜೀವಾತ್ಮನಾದ ನನ್ನನ್ನೂ ಶರೀರಾದಿ ಸಕಲ ಪದಾರ್ಥಗಳನ್ನೂ ಆಶ್ರಯಿಸಿ ತಾನೇ ಅಭಿಮಾನಿಯಾಗಿ ನಿಂತ ಮಾಯಾಚೇಷ್ಟಿತನಾದ ಸ್ವಾಮಿಯು ಆದರದಿಂದ ವಾಸಮಾಡುವ ದಕ್ಷಿಣದಿಕ್ಕಿನಲ್ಲಿರುವ ಶ್ರೀ ವನಗಿರಿಯ ದಿಕ್ಕನ್ನು ನೋಡಿ ಅಂಜಲಿಮಾಡಿ ಅದನ್ನೇ ಆಶ್ರಯಿಸಿದ ನಾನು ಬೇರೆ ಕಡೆಗೆ ಹೋಗುವೆನೋ! ನನಗೆ ಸ್ವಾಮಿಯಾದ ಅವನ ಕೃಪೆ ಎಂದಹುದೋ.

"ಸಕಲ ಲೋಕಗಳೂ ಸಕಲಾತ್ಮವರ್ಗಗಳೂ ತಾನೇ ಎಂಬಂತೆ ಅವುಗಳಿಗೆ ಅನ್ತರಾತ್ಮನಾಗಿ, ಅನ್ಯಾಶ್ರಿತರಾದ ರಾಕ್ಷಸರನ್ನು ಧ್ವಂಸಮಾಡಿ ಭಗವನ್ತನು ತ್ರಿವಿಕ್ರಮನಾಗಿ ಭೂಮಿಯೊಳಗೆ ನಡೆದು ಬೆಳೆದು ದಕ್ಷಿಣ ದಿಕ್ಕಿಗೆ ತಿಲಕ ಪ್ರಾಯವಾದ ಶ್ರೀ ವನಗಿರಿಯನ್ನು ಆಶ್ರಯಿಸಿ ಕೈಬಿಡದೆ ಇದ್ದಾನೆ. ಸ್ವಾಮಿಯಾದ ಅವನ ಉಪಕಾರಗಳು ಎಂತಹುವುಗಳೋ.

"ಅನ್ಯಾಶ್ರಿತರಾದ ರಾಕ್ಷಸರು ನಾಶಹೊಂದುವಂತೆಯೂ ಶ್ಲಾಘ್ಯರಾದ ದೇವತೆಗಳು ಶ್ರೇಯಸ್ಸನ್ನು ಹೊಂದುವಂತೆಯೂ, ಅಸಂಖ್ಯಾತವಾದ ದಿವ್ಯ ಸಂಕಲ್ಪಗಳನ್ನು ಮಾಡುವ ಮುನಿವರ್ಯರು ಆನಂದಾನುಭವವಂ ಮಾಡಲು ಅನುಕೂಲವಾದ ಮಧುರತಮ ಗೀತಾತ್ಮಕವಾದ ದಿವ್ಯಕವಿತಾ ರೂಪವಾದ ಕೃತಿಗಳನ್ನು ತಾನೇ ಹಾಡಿ (ನಾನೇ ತಾನು ಎಂಬಂತೆ ನಿಂತು) ಶ್ರೀ ವನಗಿರಿಯ ನಾಥನಾಗಿ ತೆನ್ನಾ ಎಂದು ಗೀತಾನುಕರಣವಂ ಮಾಡುತ್ತಿದ್ದಾನೆ. (ತೆನ್ನಾ ಎಂಬ ಪದ ಆನಂದೋದ್ರೇಕದಿಂದ ಹೊರಡುವ ಗೀತೆ-- ಪಕ್ಕಿಗಳು ತೆನ್ನಾ ಎಂದು ಹಾಡುತ್ತವೆ ಎಂದು ತಮಿಳು ಗ್ರಂಥಗಳಲ್ಲಿ ವಿವರಿಸಲ್ಪಟ್ಟಿವೆ. ಸ್ವತಂತ್ರವಾಗಿಯೂ, ಸ್ವಚ್ಛಂದವಾಗಿಯೂ ಹಾಡಿದಾಗ ಈ ಹೆಸರು ಅನ್ವಯ)

"ವಿಧಿರುದ್ರಾದಿಗಳಿಗೆ ದುರ್ಲಭವಾದ ಭಕ್ತಿಯನ್ನುಂಟುಮಾಡಿ ಅವರು ಮಾಡುವ ಸ್ತೋತ್ರಗಳಿಂದ ಸನ್ತುಷ್ಟನಾಗಿ ಅವರ ಇಷ್ಟಾರ್ಥಗಳನ್ನು ಅನುಗ್ರಹಿಸುವ ಸ್ವಾಮಿಯು ತ್ರೈಲೋಕವನ್ನೂ ತನ್ನ ಉದರದಲ್ಲಿಟ್ಟು ಪ್ರತಿಕಲ್ಪದಲ್ಲೂ ರಕ್ಷಿಸುವವನಾಗಿ ಶ್ರಿಯಃಪತಿಯಾದ ಭಗವನ್ತನು ಶ್ರೀ ವನಗಿರಿಯನ್ನೇ ಆಶ್ರಯಿಸಿ ನನ್ನನ್ನು ವಶೀಕರಿಸುವ ಮಹಾವ್ಯಾಮೋಹವುಳ್ಳವನಾಗಿದ್ದಾನೆ.

"ನನ್ನ ಸ್ವಾಮಿಯೇ! ನನ್ನಲ್ಲಿ ಕೃಪೆಮಾಡು" -- ಎಂದು ಪ್ರಾರ್ಥಿಸುವ ಬ್ರಹ್ಮರುದ್ರಾದಿದೇವತೆಗಳೂ ಅಜ್ಞಾನ ನಾಶಕರಾದ ಋಷಿಗಳೂ ಸ್ತೋತ್ರ ಮಾಡುವ ಸ್ವಾಮಿಯ ವಾಸಸ್ಥಾನವಾದ ಭ್ರಾನ್ತಿ ನಿವಾರಕವಾದ ರಮ್ಯಪರ್ವತವು ಶ್ರೀವನಗಿರಿಯೇ.

"ಶ್ರೀವನಗಿರಿಯನ್ನೂ, ಕ್ಷೀರಾಬ್ಧಿಯನ್ನೂ ನನ್ನ ತಲೆಯನ್ನೂ, ಪರಮಪದವನ್ನೂ, ಶ್ರೀ ವೇಂಕಟಾದ್ರಿಯನ್ನೂ, ನನ್ನ ಶರೀರವನ್ನೂ, ಮಾಯಾತ್ಮಕವಾದ ನನ್ನ ಆತ್ಮವಸ್ತುವನ್ನೂ, ಮನೋವಾಕ್ಕರ್ಮಗಳನ್ನೂ ಅವನು ಒಂದು ಕ್ಷಣವೂ ಬಿಟ್ಟಿರಲಾರನು, ಜಗತ್ಕಾರಣ ಭೂತನಾದ ಆ ನನ್ನ ಸ್ವಾಮಿಯು ಒಬ್ಬನೇ ಸರ್ವೇಶ್ವರನಾಗಿದ್ದಾನೆ.

"ಸಕಲ ಪದಾರ್ಥಗಳಿಗೂ ಕಾರಣಭೂತನು ಒಬ್ಬನೇ ಎಂದು ಶ್ರುತಿ ಪ್ರತಿಪಾದಿತವಾದ ಅದ್ವಿತೀಯನಾದ ಸಕಲ ಲೋಕ ಸೃಷ್ಟಿಸ್ಥಿತಿ ಸಂಹಾರಕರ್ತನಾದ ಸಮುದ್ರವರ್ಣನಾದ ನನ್ನ ಸ್ವಾಮಿಯ ರಮ್ಯವಾದ ಶೀತಳವಾದ ವಾಸಸ್ಥಳ ಶ್ರೀವನಾದ್ರಿಯನ್ನು 'ಎಲೈ ಮನಸ್ಸೇ! ನೀನು ಶರೀರಾತ್ಮಲಯವುಂಟಾಗುವಂತೆ ಆಶ್ರಯಿಸು -- ಕೈ ಬಿಡಬೇಡ -- ಹೀಗೆ ಮಾಡಿದರೆ ನೀನು ಚೆನ್ನಾಗಿ ಬಾಳುತ್ತೀಯೆ.

"ಶ್ರೀ ವನಗಿರಿಯಲ್ಲಿ ನಿತ್ಯವಾಸ ಮಾಡುವ ನಮ್ಮ ಸ್ವಾಮಿಯೇ! ನಾನೇ ನೀನಾಗಿ ನನ್ನನ್ನು ರಕ್ಷಿಸಿದವನೇ! ಶಬ್ದಾದಿ ಪಂಚ ವಿಷಯಗಳೂ, ಪಂಚಜ್ಞಾನೇನ್ದ್ರಿಯಗಳೂ, ಪಂಚಭೂತಗಳೂ, ಪ್ರಕೃತಿ ಮಹದಹಂಕಾರ ಮನಸ್ತತ್ವಗಳೂ ಈ ನಿನ್ನ ಮಹಾಮಾಯಾತ್ಮಕವಾದ ಪದಾರ್ಥಗಳೆಲ್ಲವೂ ನಶಿಸುವಂತೆ ಮಾಡು (ಇವುಗಳು ನಾಶವಾಗಿ ಆತ್ಮೋಜ್ಜೀವನವಾಗುವಂತೆ ಮಾಡು).

"ಮಹದಹಂಕಾರ ಚಿತ್ತಗಳು ನಶಿಸುವಂತೆ ಪ್ರಬಲಾದಿ ಪಂಚೇಂದ್ರಿಯಗಳು ನಶಿಸುವಂತೆ, ತಾನೇ ಅಭಿಮಾನಿಯಾಗಿ ಪ್ರವೇಶಿಸಿ ಆತ್ಮಾತ್ಮೀಯ ವಸ್ತುಗಳೆಲ್ಲಾ ತಾನೇ ಆದ ಸ್ವಾಮಿಯನ್ನು ಮಧುಕರಝುಂಕಾರಭರಿತೋದ್ಯಾನ ಪರಿವೃತವಾದ ಕುರುಹಾಪುರಿಯ ಶಠಾರಿಮುನಿಯು ಸ್ತುತಿಸಲು ರಚಿಸಿದ

ಸಹಸ್ರಪದ್ಮಾವಳಿಯಲ್ಲಿ ಮಹದಹಂಕಾರ ನಿವೃತ್ತಿಪರವಾದ ಈ ದಶಕವು ಶ್ರೀ ವನಗಿರಿಯ ವೈಭವ ವಿಷಯಕವಾದುದು."

ದಶಮಶತಕದ ಅಷ್ಟಮ ದಶಕದ ಮೊದಲಿನ ಪಾಶುರದ ಅರ್ಥ ವೈಶಿಷ್ಟದಿಂದ ಮೂಡಿದೆ.

"ಶ್ರೀ ವನಾದ್ರಿ ಎಂಬ ಹೇಳಿದ ಒಡನೆಯೇ ಶ್ರಿಯಃಪತಿಯು ಬಂದು ನನ್ನ ಮನಸ್ಸಿನೊಳಗೆ ಸಂಪೂರ್ಣವಾಗಿ ಪ್ರವೇಶಿಸಿದನು! ಈ ಶ್ರಿಯಃಪತಿಯು ಭೋಗಶಯನ ಮಾಡಿರುವ ಸ್ಥಳವು ಮಾಣಿಕ್ಯಭರಿತವಾದ ಕಾವೇರಿಯ ದಕ್ಷಿಣದಿಕ್ಕಿನಲ್ಲಿರುವ ಶ್ರೀ ನಾಮಪುರಿಯೇ!

ಇದೇ ದಶಕದ ಆರನೇ ಪಾಶುರದ ಅರ್ಥವೂ ವಿಲಕ್ಷಣವಾದದ್ದೇ. ಶ್ರೀ ನಾಮಪುರಿಯ (ತಿರುಪ್ಪೇರ್ ನಗರಾನ್) ಅಧಿಪತಿಯು ಶ್ರೀವನಗಿರಿಯಲ್ಲೇ ನಿತ್ಯವಾಸಮಾಡುವ ಆ ಸ್ವಾಮಿಯೇ ಇಲ್ಲಿ ಇರುವೆನೆಂದು ಹೇಳಿ ನನ್ನ ಮನಸ್ಸಿನಲ್ಲಿ ಸಂಪೂರ್ಣವಾಗಿ ಪ್ರವೇಶಿಸಿದನು. ನಾನು ಅವನ ಅನುಗ್ರಹ ರೂಪವಾದ ಬಹುಮಾನವನ್ನೇ ಪಡೆದು ಈ ದಿನ ಬಂದು ಅವನ ಗುಣಾನುಭವ ರೂಪವಾದ ಅಮೃತವನ್ನು ಪಾನಮಾಡಿ ಆನಂದಿಸಿದೆನು.

ನಮ್ಮಾಳ್ವಾರ್ ಅವರು ತಿರುಮಾಲಿರುಂಶೋಲೈನ ಸುಂದರ ಬಾಹುವನ್ನು ಈ ವಿಶಿಷ್ಟರೀತಿಯಲ್ಲಿ ಅನುಸಂಧಾನ ನಡೆಸಿ ಕೃತಾರ್ಥರಾಗಿದ್ದಾರೆ.

ತಿರುಮಂಗೈ ಆಳ್ವಾರ್ ಅವರು ಈ ಮಲೆಯನ್ನೂ ಅದರ ದೈವವನ್ನೂ ಅನುಭವಿಸಿರುವ ರೀತಿ ಆರ್ದ್ರವಾಗಿದೆ.

ತಿರುಕ್ಕುರುಂದಾಂಡಗಂನ ಮೂರನೇ ಪಾಶುರ ಇಂತಿದೆ--

ಪಾಯಿರುಂ ಪರವೈ ತನ್ನುಳ್
ಪರುವರೈತ್ತಿರಿತ್ತು ವಾನೋರ್ಕು
ಅಯಿರುಂದು ಅಮುದಂ ಕೊಂಡ
ಅಪ್ಪನೈ, ಎಂಬಿರಾನೈ,
ವೇಯಿರುಂ ಶೋಲೈ
ಶೂಳ್‌ನ್ದು ವಿರಕದಿರಿರಿಯನಿನ್ರ
ಮಾಯಿರುಂ ಶೋಲೈಮೇಯ,
ಮೈಂದನೈ ವಣಂಗಿ ನೇನೇ

ಅಗಾಧವಾದ ಕ್ಷೀರಾಬ್ಧಿಯಲ್ಲಿ ದೊಡ್ಡದಾದ ಮಂದರ ಪರ್ವತವನ್ನು ಮಥನಮಾಡಿ ದೇವತೆಗಳಿಗೆ ಪಕ್ಷಪಾತಿಯಾಗಿ ಅಮೃತವನ್ನು ಎತ್ತಿಕೊಟ್ಟು, ಕರುಣಿಸಿ ಉಪಕಾರಿಯಾದ ನಮ್ಮ ಸ್ವಾಮಿಯಾದವನು ಬಹುದೊಡ್ಡದಾದ ಬಿದಿರು ತೋಪುಗಳಿಂದ ಸುತ್ತುವರಿಯಲ್ಪಟ್ಟು ಅದರಿಂದ ಪ್ರಕಾಶಿಸುವ ಸೂರ್ಯನು ಕಣ್ಣಿಗೆ ಕಾಣದಂತೆ ಇರುವಂತಹ ತಿರುಮಾಲಿರುಂಶೋಲೈ ಮಲೆಯಲ್ಲಿ ನಿತ್ಯವಾಸಮಾಡುವ ದರ್ಪಯುತನಾದ ಸರ್ವೇಶ್ವರನನ್ನು ನಮಸ್ಕಾರ ಮಾಡಿದೆನು.

ಲೋಕವೆಲ್ಲವೂ ಸ್ತುತಿಸಲ್ಪಡ ತಕ್ಕ ದಕ್ಷಿಣದಿಕ್ಕಿನ ತಿರುಮಾಲಿರುಂಶೋಲೈನಲ್ಲಿ ನಿಂತ ಆನೆಯಂತಹವನೇ, ಉತ್ತರದಿಕ್ಕಿನ ತಿರುವೇಂಗಡದಲ್ಲಿ ನಿಂತ ಆನೆಯಂತಹವನೇ, ಪಶ್ಚಿಮದ ಶ್ರೀರಂಗದಲ್ಲಿ ಕೋಯಿಲಿನಲ್ಲಿ ಬೆಳಗುವ ಆನೆಯಂತಹವನೇ, ಪೂರ್ವದಿಕ್ಕಿನ ತಿರುಕ್ಕಣ್ಣಪುರದಲ್ಲಿ ಮದ್ದಾನೆಯಂತಿರುವವನೇ, ಎಲ್ಲಾ ಕಾಲದಲ್ಲಿಯೂ ನಿತ್ಯಸೂರಿಗಳಿಗೆ ಅನುಭವಿಸುವುದಕ್ಕಾಗುವಂತೆ ಮುಂದೆ ನಿಂತಿರುವವನೇ, ಅವತಾರದ ನಂತರ ಬಂದವರು ಆಶ್ರಯಿಸತಕ್ಕ ಬೆಳಗುವವನೇ, ಆದಿದೇವನೇ, ಸ್ವರ್ಣಸದೃಶನೇ, ಸಪ್ತಲೋಕಗಳನ್ನು ಕಾಯುವುದರಿಂದ ಬಂದ ಕೀರ್ತಿಯುಳ್ಳವನೇ, ನಿಹೀನತೆಯೇ ಸ್ವಭಾವವಾಗಿ ಉಳ್ಳ ದಾಸನೂ, ಜ್ಞಾನಹೀನನೂ ಆದ ನಾನು "ನನ್ನ ಆನೆಯೇ, ನನ್ನ ಆನೆಯೇ" ಎಂದು ಹೇಳುವುದಷ್ಟು ಮಾತ್ರವಲ್ಲದೆ ಬೇರೆ ಏನೆಂದು ಹೇಳಲು ಬಲ್ಲೆನು?

ಪೆರಿಯ ತಿರುಮಡಲ್‌ನ "ತೆನ್ನನುಯರ್ ಪೊರುಪ್ಪುಂ ತೆಯ್ವ ಮಡಮಲೆಯುಂ ಎನ್ನುವಿವೈಯೇ ಮುಲೆಯಾವಡಿವಮೈನ್ದ" ಈಗಾಗಲೇ ವಿವರಣೆಗೊಂಡಿದೆ. ೬೭ನೇ ಪಾಶುರದಲ್ಲಿ ಮಿನ್ನುಮಳ್ಳೈತ್ತವಳುಂ ವೇಂಗಡತ್ತೆಂ ವಿತ್ತಹನ್ನೈ ಮನ್ನನ್ನೈ ಮಾಲಿರುಂಶೋಲೈ ಮಣಾಳಿನ್ನೈ" ಎಂಬ ಶ್ಲೋಕದಲ್ಲಿ ಮಾಲಿರುಂಶೋಲೈಯಲ್ಲಿನ ಮದುಮಗನನ್ನು ಎಂದು ವಿವರಿಸಿದ್ದಾರೆ. ಶಿರಿಯತಿರುಮಡಲ್‌ನಲ್ಲಿ 'ಶೀರಾರುಂ ಮಾಲಿರುಂಶೋಲೈ' ಎಂದು ಹಿರಿದಾದ ಮಾಲಿರುಂಶೋಲೈ ಅಥವಾ ಪ್ರೀತಿಯ ಹೊಗಳಿಕೆಗೆ ಒಳಪಡುವ ಮಾಅರುಂಶೋಲೈ ಎಂಬ ಅರ್ಥದಲ್ಲಿ ಕೀರ್ತಿಸಲ್ಪಟ್ಟಿದೆ.

ನಾಲಾಯಿರದಿವ್ಯಪ್ರಬಂಧಗಳನ್ನು ಮಂಗಳಾಶಾಸನ ಮಾಡುವಾಗ ತಿರುವರಂಗತ್ತಮುದನಾರ್ ಅವರ ರಾಮಾನುಜನೂತ್ತಂದಾದಿಯ ಅನುಸಂಧಾನದೊಡನೆ ಶಾತ್ತು ಮೊರೆಮಾಡುವ ಸಂಪ್ರದಾಯವಿರುವುದರಿಂದ ಅದರಲ್ಲಿ ಬರುವ ತಿರುಮಾಲಿರುಂಶೋಲೈಯ ಮಂಗಳಾಶಾಸನ ಸ್ತೋತ್ರವನ್ನು ಅವಲೋಕಿಸಬಹುದು.

ವೇದ ಮತ್ತು ತದಂಗಗಳಾದಿ ಪ್ರತಿಪಾದ್ಯವಾದ ಸ್ಮೃತಿ, ಇತಿಹಾಸ ಪುರಾಣಾದಿಗಳಲ್ಲಿ ಪರಿಶೀಲನೆ ಮಾಡಿರುವವರು, ಆ ಸರ್ವೇಶ್ವರನಿಗೆ ಪ್ರಿಯತಮವಾದ, ವೈಕುಂಠ, ವೆಂಕಟಾದ್ರಿ, ತಿರುಮಾಲಿರುಂಶೋಲೈ ಎಂಬುವ ನಗರಿ ಮುಂತಾದವು ದಿವ್ಯಸ್ಥಳಗಳು ಎಂದು ಹೇಳುವರು. ಆ ಸರ್ವೇಶ್ವರನು ಈ ದಿವ್ಯಸ್ಥಳಗಳೊಡನೆ ಬಂದು ಸ್ವಾಮಿ ಎಂಬೆರುಮಾನಾರ್‌ರವರ ಹೃದಯದಲ್ಲಿ ಅತ್ಯಂತ ಪ್ರೀತಿಪುರಸ್ಸರವಾಗಿ ತಾನೇ ಅಪೇಕ್ಷೆಯಿಂದ ವಾಸಿಸುತ್ತಾನೆ. ಈಗ ಅದರಂತೆ ಆ ದಿವ್ಯದೇಶಗಳೊಡನೆ, ಆ ದಿವ್ಯದೇಶಗಳ ಪತಿಯಾದ ಸರ್ವೇಶ್ವರನೊಡನೆಯೂ ಅತ್ಯಂತಾದರದಿಂದ ಸ್ವಾಮಿ ಎಂದೆರುಮಾನಾರ್‌ರವರು ಬಂದು ನನ್ನ ಹೃದಯದಲ್ಲಿ ಬಹಳ ಸಂತೋಷದಿಂದ ನೆಲಸಿರುವರು ಎಂದು ತಿಳಿಸಿ ತಿರುವರಂಗತ್ತಮುದನಾರ್ ಅವರು ಅತ್ಯಂತ ಹರ್ಷ ಅನುಭವಿಸುತ್ತಾರೆ.

*

| ಕ್ರಮ ಸಂಖ್ಯೆ | ಆಳ್ವಾರ್ ಹೆಸರು | ಪ್ರಬಂಧ ಪಾಶುರಗಳು | ಮಂಗಳಾಶಾಸನ |
|---|---|---|---|
| 1. | ಪೂದತ್ತಾಳ್ವಾರ್ | ಇರಂಡಾಂತಿರುವಂದಾದಿ | 54 ನೇ ಪಾಶುರ |
| 2. | ಪೆರಿಯಾಳ್ವಾರ್ | ಪೆರಿಯಾಳ್ವಾರ್ ತಿರುಮೊಳಿ | a) 3ನೇ ಶತಕದ 4 ನೇ ದಶಕದ 5ನೇ ಪಾಶುರ b) 4ನೇ ಶತಕದ 2ಮತ್ತು 3 ದಶಕಗಳು. |
| 3. | ಆಂಡಾಳ್ | ನಾಚ್ಚಿಯಾರ್ ತಿರುಮೊಳಿ | a) 4ನೇ ದಶಕ 1ನೇ ಪಾಶುರ b) 9 ನೇ ದಶಕ. |
| 4. | ನಮ್ಮಾಳ್ವಾರ್ | ತಿರುವಾಯ್ಮೊಳಿ | a) 3ನೇ ಶತಕ 10ನೇ ದಶಕ b) 10ನೇ ಶತಕ 7ನೇ ದಶಕ c) 10ನೇ ಶತಕ 8ನೇ ದಶಕದ 1 ಮತ್ತು 6ನೇ ಪಾಶುರಗಳು |
| 5. | ತಿರುಮಂಗೈ ಆಳ್ವಾರ್ | ತಿರುಕ್ಕುಡಂ ದಾಂಡಗಂ<br>ತಿರುನೆಡುಂದಾಂಡಗಂ<br>ಪೆರಿಯ ತಿರುಮಡಲ್<br>ಶಿರಿಯ ತಿರುಮಡಲ್ | 3ನೇ ಪಾಶುರ<br>10 ನೇ ಪಾಶುರ<br>2, 3, 66 "<br>37ನೇ ಪಾಶುರ. |

# ವಾರ್ತಾಲಹರಿ

## ಶ್ರೀ ಪದ್ಮಾವತೀ ಪರಿಣಯೋತ್ಸವ

ತಿರುಮಲೆಯಲ್ಲಿ ಶ್ರೀ ಪದ್ಮಾವತೀ ಪರಿಣಯೋತ್ಸವ ಮೇ 9 ರಿಂದ ಮೂರು ದಿನಗಳ ಕಾಲ ವೈಭವದಿಂದ ನಡೆಯಿತು. ನಾರಾಯಣಗಿರಿ ಪ್ರಾಂತ್ಯದ ಉದ್ಯಾನವನಕ್ಕೆ ಸ್ವಾಮಿಯ ಉತ್ಸವ ಮೂರ್ತಿಗಳನ್ನು ಮೆರವಣಿಗೆಯಲ್ಲಿ ಕರೆತಂದು ಈ ಪರಿಣಯೋತ್ಸವವನ್ನು ನಡೆಸಲಾಯಿತು. ತಿ.ತಿ.ದೇ. ಕಾರ್ಯನಿರ್ವಹಮಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್, ಜೆ.ಇ.ಓ. ಬಾಲಸುಬ್ರಹ್ಮಣ್ಯಂ, ಸ್ಪೆಷಲ್‌ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್, ಆಲಯ ಪೇಷ್ಕಾರ್ ಶ್ರೀ ವಿ. ಜಿ. ಶ್ರೀನಿವಾಸುಲು ಮೊದಲಾದವರು ಪಾಲುಗೊಂಡ ಈ ಉತ್ಸವವನ್ನು ಕ್ಲೋಸ್ಡ್ ಸರ್ಕ್ಯೂಟ್ ಟಿ. ವಿ. ಯ ಮೂಲಕ ತಿರುಮಲೆಯ ಎಲ್ಲಕಡೆ - ಕ್ಯೂಕಾಂಪ್ಲೆಕ್ಸ್ ಒಳಗೂ ಕಾಣುವಂತೆ ಏರ್ಪಾಡು ಮಾಡಲಾಗಿದ್ದಿತು. ಇದರಿಂದಾಗಿ ಭಕ್ತರೆಲ್ಲ ಪರಿಣಯೋತ್ಸವವನ್ನೂ ಮೂರೂ ದಿನದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನೂ ಉಲ್ಲಾಸ ಭಕ್ತಿಯಿಂದ ವೀಕ್ಷಿಸುವಂತಾಯಿತು. ಈ ಉತ್ಸವದಲ್ಲಿ ಆರ್ಜಿತ ಸೇವಾಶುಲ್ಕ ರೂ. 3500/- ಸಲ್ಲಿಸಿದ ಎಂಟು ಮಂದಿ ಗೃಹಸ್ಥರು (ಹತ್ತು ಮಂದಿ ಶುಲ್ಕ ನೀಡಿದ್ದರೂ ಎಂಟು ಮಂದಿ ಮಾತ್ರ ಭಾಗವಹಿಸಿದ್ದರು) ಪಾಲುಗೊಂಡರು.

ವಾರಗಳ ರಜೆಯ ಕಾರಣದಿಂದಾಗಿ ಏಪ್ರಿಲ್ 14 - 15 ರಂದು ತಿರುಮಲೆಯಲ್ಲಿ ಯಾತ್ರಿಕರ ಸಂದಣಿ ವಿಪರೀತವಾಗಿದ್ದಿತು. ಶುಕ್ರವಾರದಂದು ಬೆಳಗ್ಗೆ 8-30ಕ್ಕೆ ಅಭಿಷೇಕಾನಂತರ ಆರಂಭವಾದ ಸರ್ವದರ್ಶನ ರಾತ್ರಿ 1 ರ ವರೆಗೆ ನಿರಂತರವಾಗಿ ನಡೆಯಿತು. ಸುಮಾರು 70 ಸಾವಿರಕ್ಕೂ ಹೆಚ್ಚು ಮಂದಿ ವೈಕುಂಠಂ ಕ್ಯೂ ಕಾಂಪ್ಲೆಕ್ಸ್, ಪಿ. ಪಿ. ಷೆಡ್‌ಗಳಲ್ಲಿನ ವ್ಯವಸ್ಥೆಯನ್ನು ಆಗಾಗ್ಗೆ ತನಿಖೆ ಮಾಡುತ್ತ ಯಾತ್ರಿಕರಿಗೆ ನೀರಿನ ಸೌಕರ್ಯ ಲಭ್ಯವಾಗುವಂತೆ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ನೋಡಿಕೊಂಡರು. ಆಲಯದ ಒಳಗಡೆ ವಿಶೇಷ ದರ್ಜೆಯ ಡೆ.ಇ.ಓ. ಶ್ರೀ ಸಿ. ವಾಸುದೇವನ್ ಅವರು ಇಡೀ ದಿನ ಭಕ್ತರ ಸಾಲು ಸಾಫಿಯಾಗಿ ಸಾಗುವಂತೆ, ಶೀಘ್ರ ದರ್ಶನ ಆಗುವಂತೆ ನೋಡಿಕೊಂಡರು. ವಿ. ಎಸ್.





ಓ. ಶ್ರೀ ಜನಾರ್ದನ ನಾಯುಡು ಅವರು ಅಲ್ಲಲ್ಲಿ ಸಂಚರಿಸುತ್ತ ಅಡೆ ತಡೆಗಳನ್ನು ನಿವಾರಿಸುತ್ತ ನಡೆದರು. ಪೇಷ್ಕಾರ್ ಶ್ರೀ ಕೋಟಿ ಮುನಿರತ್ನಂ ಅವರು ಕ್ಯೂಕಾಂಪ್ಲೆಕ್ಸ್‌ನ ಯಾತ್ರಿಕರನ್ನು ದರ್ಶನಕ್ಕೆ ಕಳುಹಿಸುತ್ತ, ಹೊರಗೆ ಕಾಯುತ್ತಿದ್ದ ಯಾತ್ರಿಕರನ್ನು ಒಳಕ್ಕೆ ಸ್ವಾಗತಿಸಿ, ವ್ಯವಸ್ಥೆ ಶಾಂತಿಗಳನ್ನು ನೋಡಿಕೊಂಡರು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್ ಅವರು ಆಲಯದ ವಿವಿಧ ಪ್ರಾಂತ್ಯಗಳನ್ನು ದರ್ಶಿಸುತ್ತ, ಆಕಸ್ಮಿಕ ತನಿಖೆಗಳನ್ನು ನಡೆಸಿ ಸೂಕ್ತ ಸಲಹೆ, ನಿರ್ದೇಶನಗಳನ್ನು ನೀಡುತ್ತ, ಯಾತ್ರಿಕರನ್ನು ವಿಚಾರಿಸುತ್ತ, ಅವರ ಕುಂದು ಕೊರತೆಗಳನ್ನು ನಿವಾರಿಸುವ ಹಾದಿಯಲ್ಲಿ ಕೃಷಿ ನಡೆಸಿದರು.

ಅಂದಿನ ಹುಂಡಿಯ ಆದಾಯ ನಲವತ್ತು ಲಕ್ಷ ರೂ.ಗಳೆಂದು ವರದಿಯಾಗಿದೆ.

## ತಿರುಮಲೆಯಲ್ಲಿ ಹೆಚ್ಚಿದ ಯಾತ್ರಿಕ ಸಂದಣಿ

ತಮಿಳುನಾಡಿನ ಜನರ ಅನುಸರಣೆಯ ಸೌರಮಾನಯುಗಾದಿ, ಗುಡ್‌ಫ್ರೈಡೆ ಶನಿವಾರ ಭಾನು ಸ್ವಾಮಿಯನ್ನು ದರ್ಶನಮಾಡಿದರು. 30 ರೂ.ಗಳ ಪ್ರತ್ಯೇಕ ಪ್ರವೇಶದ ಮೂಲಕ 24 ಸಾವಿರಮಂದಿಯೂ ಧರ್ಮದ ದರ್ಶನದ ಮೂಲಕ 50 ಸಾವಿರಕ್ಕೂ ಹೆಚ್ಚು ಮಂದಿ ದರ್ಶನ ಪಡೆದರು. ಯಾತ್ರಿಕರಿಗೆ ಸರತಿಯ ಸಾಲಿನಲ್ಲಿ ತೊಂದರೆಯಾಗದಂತೆ

## ತಿರುಮಲೆಯಲ್ಲಿ ನಿಮ್ಮಿಷ್ಟದಂತೆ ಪ್ರಯಾಣ ಸೌಕರ್ಯ

ತಿರುಮಲೆಯಲ್ಲಿ ಯಾತ್ರಿಕರು ಪಾಪನಾಶನಂ, ಆಕಾಶಗಂಗೆ, ಗೋಗರ್ಭಂ ಡ್ಯಾಂ, ಶ್ರೀ ವೇಣುಗೋ



# ಮುಂದಿನ ಸಂಚಿಕೆಯಲ್ಲಿ.........

## ಸಪ್ತಗಿರಿ --- ಜುಲೈ 1995

### ತುಲಸೀ ವೈದ್ಯ :

ತುಲಸಿ ಭಾರತೀಯ ಸಾಹಿತ್ಯದಲ್ಲೂ ಸಂಸ್ಕೃತಿಯಲ್ಲೂ ಅತಿಶ್ರೇಷ್ಠ ಸ್ಥಾನವನ್ನು ಪಡೆದದ್ದು. ಮನೆಮನೆಯ ತುಳಸೀ ಬೃಂದಾವನದಲ್ಲಿ ಬೆಳೆಯುತ್ತ ಮನೆಗೂ ಹೊರಕ್ಕೂ ಶೋಭೆಯನ್ನು ತಂದುಕೊಟ್ಟು ಆರಾಧಿತವಾಗುವ ಸಸ್ಯ. ಇದು ವೈದ್ಯಕೀಯವಾಗಿಯೂ ಬಹು ಪ್ರಯೋಜನಕಾರಿ ಎಂಬುದನ್ನು ಬೆಂಗಳೂರಿನ ಹೆಬ್ಬಾಳದ ಪ್ರಮುಖ ವಿಜ್ಞಾನಿ ಡಾ|| **ಎನ್. ಜಿ. ರಘುಮೋಹನ** ಅವರು ವಿವರಿಸುವ ಲೇಖನ.

### ಮೇಲುಕೋಟೆ :

ತಿರುನಾರಾಯಣ ಪುರ, ಯದುಶೈಲವೆಂದು ಹೆಸರಾದ ಮಂಡ್ಯಜಿಲ್ಲೆಯಲ್ಲಿರುವ ಚೆಲುವನಾರಾಯಣಸ್ವಾಮಿಯ ಗುಡಿಯ ಪವಿತ್ರ ಸ್ಥಳ. ಭಗವತ್ ರಾಮಾನುಜರಿಂದ ಅರ್ಚಿತವಾದ ಮೂರ್ತಿ, ವಿವರಗಳನ್ನು ಸಾದರ ಪಡಿಸುವವರು ಇಂಜನಿಯರ್ **ಎಂ. ಸಿ. ನರಸಿಂಹನ್.**

### ದಿವ್ಯಪ್ರಬಂಧಗಳಲ್ಲಿ ನಾಯಿಕಾಭಾವ :

ಜೀವಸತಿ ದೇವಪತಿ ಭಾವ ಎಲ್ಲ ಭಕ್ತ ಕೀರ್ತನೆಕಾರರ ಕೀರ್ತನೆಗಳ ಅವಿಭಾಜ್ಯ ಅಂಗ. ನಾಲಾಯಿರ ದಿವ್ಯಪ್ರಬಂಧಗಳು - ತಮಿಳಿನ ಅತಿಶ್ರೇಷ್ಠ ಧರ್ಮ, ನೀತಿ ಕಾವ್ಯ ಸಂಹಿತೆಗಳು. ಆಳ್ವಾರ್‌ಗಳಲ್ಲಿ ಪೆರಿಯಾಳ್ವಾರ್ - ಆಂಡಾಳ್ - ತಂದೆ ಮಗಳಾಗಿ ಅವತಾರವೆತ್ತಿದವರು. ಅವರ ಪಾಶುರಗಳ ಸೊಗಸೇ ಬೇರೆ; ಅಲ್ಲಿನ ನಾಯಿಕಾಭಾವದ ಲಹರಿಯ ಪರಿಚಯ - ಮಾಡಿಕೊಡುವವರು - ಖ್ಯಾತವಿದ್ವಾಂಸ **ಎಂ. ಆರ್. ನರಸಿಂಹನ್.**

### ಜ್ಞಾನ ನಿಧಿ ವ್ಯಾಸರು :

'ವ್ಯಾಸೋಚ್ಛಿಷ್ಟಂ ಜಗತ್ಸರ್ವಂ' ಎಂಬುದು ಲೋಕೋಕ್ತಿ. ಅಂತಹ ಜ್ಞಾನ ನಿಧಿಯ ಪರಿಚಯ ಮಾಡಿಕೊಡುತ್ತಾರೆ **ಸಂತ ಶ್ರೀ ಶ್ರೀ ಹರಿಹರಾನಂದ ಸರಸ್ವತೀ ಸ್ವಾಮಿಜೀ.**

### ಗೋಪಾಲವಿಂಶತಿ :

ವೇದಾಂತ ದೇಶಿಕರ ಹೆಸರು ಆಸ್ತಿಕ ಭಕ್ತರಿಗೆ ಅಪರಿಚಿತವಲ್ಲ. ಅವರು ಬರೆದ ಗೋಪಾಲವಿಂಶತಿ ತಿರುವಹೀಂದ್ರಪುರದ ಶ್ರೀಕೃಷ್ಣ ಸ್ತುತಿಯ ಪದ್ಯ ಕೃತಿ. ಅದನ್ನು ವಿವರಿಸುತ್ತಾರೆ ಖ್ಯಾತ ಉಪಾಧ್ಯಾಯ **ಸಿ. ಗೋವಿಂದಾಚಾರ್ಯ.**

ಜೊತೆಗೇ ಹಲವು ಹತ್ತು ಸಾಮಯಿಕ ಲೇಖನಗಳು, ಸಂಗ್ರಣೀಯ, ವಾಚನೀಯ ಸಂಚಿಕೆ. ತಮ್ಮ ಪ್ರತಿಯನ್ನು ಕಾಯ್ದಿರಿಸಿ. ಬಿಡಿ ಪ್ರತಿ - ಕೇವಲ ರೂ. 2-00. ವಾರ್ಷಿಕ ಚಂದಾ ರೂ. 24/- ಮಾತ್ರ. ತಮ್ಮ ಚಂದಾ ಹಣವನ್ನು ಡಿ.ಡಿ; / ಎಂ. ಓ. ರೂಪದಲ್ಲಿ ಕಳುಹಿಸಬಹುದು -- ವಿಳಾಸ -- ಸಂಪಾದಕರು ಸಪ್ತಗಿರಿ, ತಿ.ತಿ.ದೇ. ತಿರುಪತಿ -- 571 507. ತಮ್ಮ ವಿಳಾಸವನ್ನು ಬಿಡಿ ಬಿಡಿಯಾದ ಅಕ್ಷರಗಳಲ್ಲಿ ಬರೆಯಲು ದಯವಿಟ್ಟು ಮರೆಯದಿರಿ.

ಪಾಲಸ್ವಾಮಿ ಗುಡಿಗಳ ಮಧ್ಯೆ ತಮಗಿಷ್ಟ ಬಂದಂತೆ ಪ್ರಯಾಣ ಮಾಡುವ ಸೌಲಭ್ಯದ 'ಇಷ್ಟಬಂದಂತೆ ಪ್ರಯಾಣ' ಟಿಕೆಟ್‌ಗಳನ್ನು ರಸ್ತೆ ಸಾರಿಗೆ ಸಂಸ್ಥೆ ಪ್ರವೇಶಗೊಳಿಸಿದೆ. ಐದು ರೂಪಾಯಿಗಳ ಈ ಟಿಕೆಟ್‌ನಿಂದ ಐದು ಗಂಟೆಗಳ ಅವಧಿಯಲ್ಲಿ ಯಾತ್ರಿಕರು ಈ ಹಾದಿಯ ನಾಲ್ಕೂ ಸ್ಥಳಗಳನ್ನು ನೋಡಿಕೊಂಡು ಹಿಂದಿರುಗಬಹುದು.

## ಸ್ವಾಮಿ ಸೇವೆಯಲ್ಲಿ ಮಹಾರಾಷ್ಟ್ರದ ಮುಖ್ಯಮಂತ್ರಿ

ಮಹಾರಾಷ್ಟ್ರದ ಮುಖ್ಯಮಂತ್ರಿ ಶ್ರೀ ಮನೋಹರ ಜೋಷಿ ಅವರು ಸತೀಸಹಿತರಾಗಿ ಏಪ್ರಿಲ್ 28 ರಂದು ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ಅಂದು ಸಂಜೆ ಏಳುಗಂಟೆಗೆ ಆಲಯಕ್ಕೆ ಅವರು ಬಂದಾಗ ಆಲಯ ಮಹಾದ್ವಾರದಲ್ಲಿ ಅವರಿಗೆ ಸಾಂಪ್ರದಾಯಕ ಸ್ವಾಗತ ಲಭಿಸಿತು. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಸ್ಪೆಷಲ್ ಗ್ರೇಡ್ ಡೆ.ಇ.ಓ. ಶ್ರೀ ವಾಸುದೇವನ್ ಮೊದಲಾದವರು ಅವರನ್ನು ಸ್ವಾಗತಿಸಿ ಆಲಯದ ಒಳಕ್ಕೆ ಬರಮಾಡಿಕೊಂಡರು.



ಮಹಾರಾಷ್ಟ್ರದ ಮುಖ್ಯಮಂತ್ರಿ ಶ್ರೀ ಮನೋಹರ ಜೋಷಿ ಅವರಿಗೆ ಶ್ರೀ ಬಾಲಸುಬ್ರಹ್ಮಣ್ಯಂ ಪ್ರಸಾದ ನೀಡುತ್ತಿರುವಿಕೆ

## ಸ್ವಾಮಿ ಸೇವೆಯಲ್ಲಿ ಕರ್ನಾಟಕದ ಮುಖ್ಯಮಂತ್ರಿ

ಕರ್ನಾಟಕದ ಮುಖ್ಯಮಂತ್ರಿ ಶ್ರೀ ದೇವೇಗೌಡರು ತಮ್ಮ ಪುತ್ರ ರೇವಣ್ಣ (ವಿಧಾನಸಭಾಸದಸ್ಯರು) ಅವರೊಂದಿಗೆ ತಿರುಮಲೆಗೆ ತಮ್ಮ ಹುಟ್ಟು ಹಬ್ಬದ ದಿನ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆಶೀರ್ವಾದ ಪಡೆದರು.

ಮೇ ತಿಂಗಳ ಹದಿನೆಂಟರಂದು ಬೆಳಗ್ಗೆ ಆಲಯಕ್ಕೆ ಆಗಮಿಸಿದ ಅವರನ್ನು ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಮೊದಲಾದವರು ಸಾಂಪ್ರದಾಯಕವಾಗಿ ಸ್ವಾಗತಿಸಿದರು. ಸ್ವಾಮಿ ದರ್ಶನಾನಂತರ (ತಿರುಪ್ಪಾವಡಾ ಸೇವೆಯಲ್ಲಿ ಪಾಲುಗೊಂಡು) ಆಶೀರ್ವಚನವನ್ನು ಪಡೆದು ಹಿಂದಿರುಗಿದರು.



ಆಲಯಕ್ಕೆ ಆಗಮಿಸುತ್ತಿರುವ ಕರ್ನಾಟಕದ ಮುಖ್ಯಮಂತ್ರಿ ಶ್ರೀ ಎಚ್. ಡಿ. ದೇವೇಗೌಡರು

## ಆಲಯದ ಸುತ್ತ ವೇದ ಸಂಕೀರ್ತನೆ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಸುತ್ತ ದಿನವೂ ಬೆಳಗ್ಗೆ 6 ಗಂಟೆಯಿಂದ 7 ಗಂಟೆಯ ವರೆಗೆ ವೇದ ಗಾನ ನಡೆಸಲು ಏರ್ಪಾಡು ಮಾಡಲಾಗಿದೆ. ಇದಕ್ಕಾಗಿ ಧರ್ಮಗಿರಿಯಲ್ಲಿನ ವೇದಪಾಠಶಾಲೆಯ ಅರವತ್ತು ಮಂದಿ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲಾಗಿದೆ. ವಿದ್ಯಾರ್ಥಿಗಳನ್ನು ಪಾಠಶಾಲೆಯಿಂದ ತಿರುಮಲೆಯ ಆಲಯದ ಬಳಿಗೆ ದಿನವೂ ಕರೆದುಕೊಂಡು ಬರಲು ಉಚಿತ ಬಸ್ ವ್ಯವಸ್ಥೆ ಮಾಡಲಾಗಿದೆಯೆಂದು ವಿವರಿಸುತ್ತ ತಿ.ತಿ.ದೇ. ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಅವರು - ಆಲಯದ ಸುತ್ತ ವೇದಘೋಷದ ನಿನಾದ ಕೇಳಿಬಂದು ಆಧ್ಯಾತ್ಮಿಕ ವಾತಾವರಣ ನೆಲೆಸಲು ಇದು ಮೋಹದಕಾರಿ ಆಗುತ್ತದೆ -- ಎಂದು ವಿವರಿಸಿದರು. ಅವರು ಆಕಾಶಗಂಗೆ, ಪಾಪನಾಶನಂಗಳನ್ನು ಸಂದರ್ಶಿಸಿ ಅಲ್ಲಿನ ಯಾತ್ರಿಕ ಸೌಲಭ್ಯ ವ್ಯವಸ್ಥೆಯ ಬಗ್ಗೆ ಸೂಕ್ತ ಕ್ರಮಗಳನ್ನು ಕೈಗೊಳ್ಳಲು ಆದೇಶಗಳನ್ನೂ ಜಾರಿಮಾಡಿದ್ದಾರೆ.

# ಅನ್ನಮಾಚಾರ್ಯ ಜಯಂತಿ ಉತ್ಸವಗಳು

ಅನ್ನಮಾಚಾರ್ಯರ 587ನೇ ಜಯಂತಿ ಉತ್ಸವಗಳನ್ನು ತಿರುಮಲೆ ತಿರುಪತಿಗಳಲ್ಲಿ ಯಶಸ್ವಿಯಾಗಿ ನಡೆಸಲಾಯಿತು.

ಮೇ 14 ರಂದು ತಿರುಮಲೆಯಲ್ಲಿ ಸ್ವಾಮಿಯ ಉತ್ಸವ ವಿಗ್ರಹಗಳನ್ನು ಮೆರವಣಿಗೆಯಲ್ಲಿ ದೇಡಿ ಆಂಜನೇಯಸ್ವಾಮಿ ಗುಡಿಯವರೆಗೆ ತರಲಾಯಿತು. ತಿರುವೀಧಿಗಳಲ್ಲಿ ನಗರಸಂಕೀರ್ತನೆ ನಡೆಯಿತು.

ಖ್ಯಾತ ಸಂಗೀತ ವಿದುಷಿ ಶ್ರೀಮತಿ ಎ. ಎಸ್. ಸುಬ್ಬುಲಕ್ಷ್ಮಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್,

ಮೊದಲಾದವರು ಭಾಗವಹಿಸಿದ್ದರು. ಅಂದು ಸಂಜೆ ತಿರುಮಲೆಯ ಆಸ್ಥಾನ ಮಂಟಪದಲ್ಲಿ ಜಯಂತಿಯ ಆರಂಭೋತ್ಸವ ನಡೆಯಿತು. ಶ್ರೀ ಎನ್. ರಮೇಶಕುಮಾರ್ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಭೆಯಲ್ಲಿ ಆಂಧ್ರಪ್ರದೇಶ ದೇವಾದಾಯ ಇಲಾಖೆಯ ಪ್ರಿನ್ಸಿಪಲ್ ಸೆಕ್ರೆಟರಿ ಶ್ರೀ ರಾಮ್‌ಬಾಬು ಅವರು ಪಾಲುಗೊಂಡಿದ್ದರು.

ಮೇ 14 ರಂದು ಬೆಳಗ್ಗೆ ತಿರುಪತಿಯ ಶ್ರೀ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಶ್ರೀ ಜಿ. ನಾಗೇಶ್ವರ ನಾಯುಡು ಅವರ ನೇತೃತ್ವದಲ್ಲಿ 'ಪರಿಯವತಾರ ಮಿತಡು ಅನ್ನಮಯ್ಯ' ಬೃಂದಗಾಯನವಾದಮೇಲೆ ಶ್ರೀ ವೆ. ವೆಂಕಟೇಶ್ವರ್ಲು ಅವರ ಹರಿಕಥೆ ನಡೆಯಿತು. ಅಂದು ಸಂಜೆ ಒಂಗೋಲು ಶ್ರೀ ರಂಗಯ್ಯ ಬೃಂದವವರಿಂದ ನಾವಸ್ವರವಾದಮೇಲೆ ಶ್ರೀಮತಿ ಪಿ. ಲೀಲಾವತಿ ಅವರ ಸಂಗೀತ ಸಭೆ, ಶ್ರೀ ಜಿ. ನಾಗೇಶ್ವರ ನಾಯುಡು ಅವರ ಸಂಗೀತ ಸಭೆಗಳು ನಡೆದವು.

ಮೇ 15 ರಂದು ಬೆಳಗ್ಗೆ ಅನ್ನಮಾಚಾರ್ಯರ ಕಲಾಮಂದಿರದಲ್ಲಿ ಉಪನ್ಯಾಸ, ಸಂಗೀತಸಭೆ. ಅನ್ನಮಯ್ಯ ಸಂಕೀರ್ತನೆಗಳಲ್ಲಿ ದಶಾವತಾರ ವೈಭವದ ಬಗ್ಗೆ ವಿವರವಾಗಿ ವ್ಯಾಖ್ಯಾನ ಮಾಡಿದವರು ಎಸ್.ವಿ.ಯು. ನ ಡಾ|| ಜಿ. ದಾಮೋದರನಾಯುಡು ಅವರು. ಶ್ರೀಮತಿ ಗೌರಿಶಾಸ್ತ್ರಿ ಅವರು ಅನ್ನಮಾಚಾರ್ಯ ಕೃತಿಗಳನ್ನು ಹಾಡಿ ರಂಜಿಸಿದರು.

ಅಂದು ಸಂಜೆ ತಿರುಪತಿಯ ಶ್ರೀ ಟಿ. ವಿ. ಸುಬ್ಬರಾವು ಅವರ ಗಾನಕಚೇರಿ, ಶ್ರೀ ಜಿ. ಬಾಲಕೃಷ್ಣಪ್ರಸಾವರ ಗಾಯನಕಚೇರಿ, ಶ್ರೀಮತಿ ಸಿ. ರಾಜೇಶ್ವರಿಯವರ ಗಾಯನ ಕಚೇರಿಗಳು ನಡೆದವು.



**ಚಿತ್ರವಿವರ :** ನಗರ ಸಂಕೀರ್ತನೆಯ ಮೆರವಣಿಗೆ

ತಿರುಮಲೆಯ ಆಲಯವಲ್ಲಿ ಜಿಯರ್‌ಸ್ವಾಮಿಗಳು ಶ್ರೀ ಎನ್ ರಮೇಶ್‌ಕುಮಾರ್, ಶ್ರೀ ರಾಂಬಾಬು

ಆಲಯವಲ್ಲಿ ಶ್ರೀಮತಿ ಎಂ. ಎಸ್. ಶ್ರೀ ಸದಾಶಿವಂ ಡಾ. ಎಂ. ಮೋಹನ್.

# ರಾಮಾನುಜರ ಅವತಾರೋತ್ಸವ

ವಿಶಿಷ್ಟಾದ್ವೈತದ ಆಚಾರ್ಯ ರಾಮಾನುಜರ ತಿರುನಕ್ಷತ್ರ ಉತ್ಸವವನ್ನು ಮೂರುದಿನಗಳ ಕಾಲ ತಿ.ತಿ.ದೇ. ದಿವ್ಯಪ್ರಬಂಧ ಪ್ರಾಜೆಕ್ಟ್ ವಿಶಿಷ್ಟ ರೀತಿಯಲ್ಲಿ ಮೂರುದಿನಗಳ ಕಾಲ ಆಚರಿಸಿತು.

28-4-95 ರಂದು ತಿರುಮಲೆಯಲ್ಲಿನ ಆಸ್ಥಾನ ಮಂಟಪದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್ ಅವರು ದೀಪ ಬೆಳಗಿಸುವುದರ ಮೂಲಕ ಉತ್ಸವದ ಆರಂಭವನ್ನು ಘೋಷಿಸಿದರು. ಶ್ರೀ ಭಾಷ್ಯಂ ಅಪ್ಪಲಾಚಾರ್ಯಲು ಅವರು ತಿರುಮಲೆಗೆ ರಾಮಾನುಜರಿಂದ ಸಂದ ಸೇವೆಯನ್ನು ವಿವರಿಸಿದರು. ಈ ಅವತಾರೋತ್ಸವ ಸಮಯದಲ್ಲಿ ತಿರುಮಲೆಯ ಅನಂತಾಳ್ವಾನ್ ಅವರ ವಂಶಸ್ಥರಾದ ಶ್ರೀ ಟಿ. ಎ. ಪಿ. ಅನಂತಾಚಾರ್ಯುಲು ಅವರನ್ನು ಸನ್ಮಾನಿಸಲಾಯಿತು. ಶ್ರೀದೇವೇಂದ್ರ ಪಿಳ್ಳೈ ಬೃಂದದವರು ಭರತನಾಟ್ಯದಲ್ಲಿ ನಾಚ್ಚಿಯಾರ್ ತಿರುಮೊಳಿಯನ್ನು ವಿವರಿಸಿದರು.

ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯದ ಸೆನೆಟ್ ಹಾಲಿನಲ್ಲಿ 29-4-95 ರಂದು ವಿಶಿಷ್ಟಾದ್ವೈತ ದರ್ಶನ ವಿಚಾರಗೋಷ್ಠಿ ಕಾರ್ಯಕ್ರಮವನ್ನು ತತ್ತ್ವಶಾಸ್ತ್ರ ವಿಭಾಗದ ಸಹಯೋಗದೊಡನೆ ಆಯೋಜಿಸಲಾಗಿದ್ದಿತು. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರ ಅಧ್ಯಕ್ಷತೆಯಲ್ಲಿ, ಪ್ರಧಾನಮಂತ್ರಿಗಳ ಸಮಾಚಾರ ವಿಭಾಗ ಸಲಹೆಗಾರರಾದ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ಮುಖ್ಯ ಅತಿಥಿಯಾಗಿ ಪಾಲುಗೊಂಡು ರಾಮಾನುಜರ ತತ್ತ್ವ ಶ್ರೀ ಸಾಮಾನ್ಯರಿಗೆ ಮುಟ್ಟಲನುವಾಗುವಂತೆ ತಿ.ತಿ.ದೇ. ಗಳು ಆಲಯದ ಆಚಾರ, ಅರ್ಚನೆ, ಆರಾಧನೆಗಳನ್ನೂ ಯಾತ್ರಿಕೋಪಯೋಗಿ ಕೆಲಸಗಳನ್ನೂ ಪ್ರಧಾನವೆಂದು ಭಾವಿಸಿ ಕೆಲಸ ಮಾಡಬೇಕಾದ ಅಗತ್ಯವನ್ನು ಮರೆಯಬಾರದು ಎಂದರು. ಪದ್ಮಭೂಷಣ ಪ್ರಾಚಾರ್ಯ ಕೆ. ಸಚ್ಚಿದಾನಂದ ಮೂರ್ತಿಯವರು ವಿಚಾರಗೋಷ್ಠಿಯ ಪ್ರಧಾನ ಉಪನ್ಯಾಸ ನೀಡಿದರು. ಎಸ್. ವಿ. ಯೂನಿವರ್ಸಿಟಿಯ ಉಪಕುಲಪತಿ ಪ್ರಾಚಾರ್ಯ ಆರ್. ರಾಮಮೂರ್ತಿ ಅವರು ದೀಪ ಹಚ್ಚಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಸಪ್ತಗಿರಿ ಕಲಾವಿದ ಡಾ|| ಕೆ. ಜಗದೀಶ್ ಅವರು ಬರೆದ ರಾಮಾನುಜರ ತೈಲವರ್ಣಚಿತ್ರವನ್ನು ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ಅನಾವರಣಗೊಳಿಸಿದರು. ಬೆಂಗಳೂರಿನ ಸಾಲಿಗ್ರಾಮ ಕೃಷ್ಣ ರಾಮಚಂದ್ರರಾಯರು ರಾಮಾನುಜರ ತತ್ತ್ವವನ್ನು ವಿವರಿಸಿದರು. ಅಂದು ಮಧ್ಯಾಹ್ನದ ಸಭೆಯಲ್ಲಿ ಶ್ರೀ ಟಿ. ಸಿ. ಎ. ರಾಮಾ







ಸುಜನ್ ಅವರ ಅಧ್ಯಕ್ಷತೆಯಲ್ಲಿ ತತ್ವಶಾಸ್ತ್ರ ವಿಭಾಗ ಪ್ರಾಚಾರ್ಯ ಸಿ. ರಾಮಯ್ಯನವರೂ, ಡಾ|| ಎಂ. ವರದರಾಜನ್ ಅವರೂ ಮಾತನಾಡಿದರು.

30-4-95 ರಂದು ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ಶ್ರೀ ಎನ್. ರಮೇಶ್‌ಕುಮಾರ್ ಅವರ ಅಧ್ಯಕ್ಷತೆಯಲ್ಲಿ ಶ್ರೀಮತ್ ಪರಮ ಹಂಸ ಪರಿವ್ರಾಜಕಾಚಾರ್ಯ ತಿರುವೆಂಕಟ ರಾಮಾನುಜ ಜೀಯರ್ ಸ್ವಾಮಿಗಳು ಅನುಗ್ರಹ ಭಾಷಣ ನೀಡಿದರು. ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ಉಪಕುಲಪತಿ ಪ್ರಾಚಾರ್ಯ ಡಾ|| ಎಸ್. ಬಿ. ರಘುನಾಥಾಚಾರ್ಯರೂ, ಶ್ರೀ ಬಿ. ಎ. ಕೃಷ್ಣಮಾಚಾರ್ಯರೂ ಮಾತನಾಡಿದರು. ಶ್ರೀರಂಗಂ ನ ಶ್ರೀಮತಿ ಚೂಡಾಮಣಿ ಬೃಂದದವರು ಆಳ್ವಾರರ ಪಾಶುರಗಳನ್ನು ಹಾಡಿ ರಂಜಿಸಿದರು.

ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್‌ನ ಡಾ|| ಪೊನ್ ಶೌರಿರಾಜನ್ ಅವರು ಸ್ವಾಗತಿಸಿದ ಸಭೆಯಲ್ಲಿ ಪ್ರಾಜೆಕ್ಟ್‌ನ ಶ್ರೀ ಆರ್. ವೆಂಕಟರಮಣ ರೆಡ್ಡಿ ಅವರು ವಂದನಾರ್ಪಣೆ ಮಾಡಿದರು. ಶ್ರೀ ಸಚ್ಚಿದಾನಂದಮೂರ್ತಿ ಅವರು ಬರೆದ ಶ್ರೀ ರಾಮಾನುಜ ಸಿದ್ಧಾಂತ ಪುಸ್ತಕವನ್ನು ಬಿಡುಗಡೆ ಮಾಡಲಾಯಿತು.

*

## ತಿಂಗಳಿನ ಮುಖ್ಯದಿನಗಳು

### ಜುಲೈ --- 1995

| | | |
|---|---|---|
| 4--7--95 | ಮಂಗಳವಾರ | ಶ್ರೀನಿವಾಸಮಂಗಾಪುರದಲ್ಲಿ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಸಾಕ್ಷಾತ್ಕಾರ ವೈಭವ. |
| 5--7--95 | ಬುಧವಾರ | ಶ್ರೀ ವಿಖನಸಾಚಾರ್ಯ ಉತ್ಸವಾರಂಭ. |
| 7--7--95 | ಶುಕ್ರವಾರ | ಶ್ರೀ ಪೆರಿಯಾಳ್ವಾರ್ ಶಾತ್ತುಮೊರೆ. |
| 9--7--95 | ಭಾನುವಾರ | ಶ್ರೀ ನಾಥಮುನಿಗಳ ವರ್ಷ ತಿರುನಕ್ಷತ್ರ. |
| 12--7--95 | ಬುಧವಾರ | ವ್ಯಾಸಪೂಜೆ. |
| 13--7--95 | ಗುರುವಾರ | ಗಾಯತ್ರೀ ಜಪ. |
| 14--7--95 | ಶುಕ್ರವಾರ | ಶ್ರೀ ವಿಖಾನಸಾಚಾರ್ಯ ಶಾತ್ತುಮೊರೆ. ಋಗ್ವೇದ ಉಪಾಕರ್ಮ. |
| 17--7--95 | ಸೋಮವಾರ | ತಿರುಮಲೆಯಲ್ಲಿ ಆಣಿವರ ಆಸ್ಥಾನ. |
| 22--7--95 | ಶನಿವಾರ | ಶ್ರೀ ಆಂಡಾಳ್ ತಿರುವಾಡಿಪ್ಪೂರಂ ಉತ್ಸವಾರಂಭ. |
| 27--7--95 | ಗುರುವಾರ | ಶ್ರೀಚಕ್ರತ್ತಾಳ್ವಾರ್ ವರ್ಷ ತಿರುನಕ್ಷತ್ರ. |



## ಶ್ರಮಶಕ್ತಿ ಪ್ರಶಸ್ತಿ



ತಿ. ತಿ. ದೇವಸ್ಥಾನಗಳಲ್ಲಿ ಸೂಪರಿಂಟೆಂಡೆಂಟ್ ಆಗಿ ಕೆಲಸಮಾಡುತ್ತಿರುವ ಶ್ರೀ ಚಂದ್ರಶೇಖರ ನಾಯುಡು ಅವರಿಗೆ 1995 ರ ಕಾರ್ಮಿಕರ ದಿನಾಚರಣೆಯ ಅಂಗವಾಗಿ ಆಂಧ್ರಪ್ರದೇಶ ಸರಕಾರ ಶ್ರಮಶಕ್ತಿ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

ಕಳೆದ ಇಪ್ಪತ್ತೈದು ವರ್ಷಗಳಿಂದ ತಿ. ತಿ. ದೇವಸ್ಥಾನಗಳಲ್ಲಿ ಕೆಲಸಮಾಡುತ್ತಿರುವ ಶ್ರೀ ವಿ. ಚಂದ್ರಶೇಖರ ನಾಯುಡು ಅವರು ತಿ.ತಿ.ದೇ. ಕಾರ್ಮಿಕ ಉದ್ಯೋಗಿಗಳ ಸಮಾಖ್ಯೆಯ ಕಾರ್ಯದರ್ಶಿಗಳೂ ಆಗಿದ್ದಾರೆ. ಶ್ರಮಶಕ್ತಿ ಪ್ರಶಸ್ತಿಯನ್ನು ಹೈದರಾಬಾದಿನ ರವೀಂದ್ರ ಭಾರತಿಯಲ್ಲಿ ನಡೆದ ಕಾರ್ಮಿಕರ ದಿನಾಚರಣೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರು ಮೇ 1 ರಂದು ನೀಡಿದರು.

**Published** on behalf of T.T. Devasthanams by N. S. Ramamurthy, M.A., Editor and
**Printed at** T.T.D. Press, by P. Mohan Rao, Manager, T.T.D. Press, Tirupati - 517 507.

